# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮಾರ್ಚ್ ೧೭, ೨೦೧೬ (ಫಾಲ್ಗುಣ ೨೭, ಶಕ ವರ್ಷ ೧೯೩೭)<br>Bengaluru, Thursday, March 17, 2016 (Phalguna 27, Shaka Varsha 1937) | ಸಂಚಿಕೆ ೧೧<br>Issue 11 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಔಷಧ ನಿಯಂತ್ರಣ ಇಲಾಖೆಯಲ್ಲಿ ಮೇಲ್ದರ್ಜೆಗೇರಿಸಿದ ಪ್ರಿನ್ಸಿಪಾಲ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆಕುಕ 65 ಐಎಂಎಂ 2013,ದಿನಾಂಕ:24.07.2015.

2 ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ/38/ ಸೇನಿಇ/1996, ದಿನಾಂಕ:01.08.1996.

3. ಔಷಧ ನಿಯಂತ್ರಕರ ಪತ್ರ ಸಂಖ್ಯೆ:ಔನಿಇ/414/ಸಿಬ್ಬಂದಿ/2015-16, ದಿ:11.09.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿನ ಸರ್ಕಾರದ ಆದೇಶದಲ್ಲಿ ಔಷಧ ನಿಯಂತ್ರಣ ಇಲಾಖೆಯಲ್ಲಿ ಪ್ರಸ್ತುತ, ಬೆಂಗಳೂರು ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿನ ಎರಡು ಚೀಫ್ ಸೈಂಟಿಫಿಕ್ ಆಫೀಸರ್ ಹುದ್ದೆಗಳ ಪೈಕಿ ಒಂದು ಚೀಫ್ ಸೈಂಟಿಫಿಕ್ ಆಫೀಸರ್ ಹುದ್ದೆಯನ್ನು ಪ್ರಿನ್ಸಿಪಾಲ್ ಸೈಂಟಿಫಿಕ್ ಆಫೀಸರ್ ಹುದ್ದೆಯನ್ನಾಗಿ ವೇತನ ಶ್ರೇಣಿ (40050-56550) ಮೇಲ್ದರ್ಜೆಗೇರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(3)ರ ಪತ್ರದಲ್ಲಿ ಔಷಧ ನಿಯಂತ್ರಣ ಇಲಾಖೆಯಲ್ಲಿ ಮೇಲ್ದರ್ಜೆಗೇರಿಸಲಾದ ಪ್ರಿನ್ಸಿಪಾಲ್ ಸೈಂಟಿಫಿಕ್ ಆಫೀಸರ್ ಹುದ್ದೆಯನ್ನು ಔಷಧ ನಿಯಂತ್ರಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಸಾಕಷ್ಟು ಕಾಲಾವಕಾಶ ಬೇಕಾಗಿರುವುದರಿಂದ ಈ ಹುದ್ದೆಯನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ತುಂಬಲು ಔಷಧ ನಿಯಂತ್ರಕರು ಕೋರಿರುತ್ತಾರೆ. ಹಿನ್ನೆಲೆಯಲ್ಲಿ ಹಾಲಿ ಜಾರಿಯಲ್ಲಿರುವ ಔಷಧ ನಿಯಂತ್ರಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳು 2013ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ಉದ್ದೇಶಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 65 ಐಎಂಎಂ 2013, ಬೆಂಗಳೂರು, ದಿನಾಂಕ:06.01.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ **ಸಂಖ್ಯೆ:ಆಕುಕ 65 ಐಎಂಎಂ 2013, ದಿನಾಂಕ:24.07.2015ರನ್ವಯ** ಮೇಲ್ದರ್ಜೆಗೇರಿಸಿರುವ ಔಷಧ ನಿಯಂತ್ರಣ ಇಲಾಖೆಯ ಒಂದು ಪ್ರಿನ್ಸಿಪಾಲ್ ಸೈಂಟಿಫಿಕ್ ಆಫೀಸರ್ (ವೇತನ ಶ್ರೇಣಿ ರೂ.40,050-1050-45300-1200-52500-1350-56550) ಹುದ್ದೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ **ಅನುಬಂಧದಲ್ಲಿ** ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗದಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ಔಷಧ ನಿಯಂತ್ರಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ 2013ಕ್ಕೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2) ಶಾಖೆಯು ದಿನಾಂಕ:16.12.2015ರ ಟಿಪ್ಪಣಿ ಸಂಖ್ಯೆ:ಸಿಆಸುಇ 166 ಸೇನಿಡಿ 2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾ.ವೈ.ಪ ಮತ್ತು ಸಮನ್ವಯ)

**ಸರ್ಕಾರದ ಆದೇಶ ಸಂಖ್ಯೆ:ಆಕುಕ 65 ಐಎಂಎಂ 2013, ಬೆಂಗಳೂರು, ದಿನಾಂಕ:06.01.2016ರ ಆದೇಶಕ್ಕೆ ಅನುಬಂಧ**

| ಹುದ್ದೆಯ ಪದನಾಮ ಮತ್ತು ವೇತನ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಟ ವಿದ್ಯಾರ್ಹತೆ |
|---|---|---|---|
| ಪ್ರಿನ್ಸಿಪಾಲ್ ಸೈಂಟಿಫಿಕ್ ಆಫೀಸರ್ (ವೇತನ ಶ್ರೇಣಿ ರೂ.40050–56550) | 01 | ಚೀಫ್ ಸೈಂಟಿಫಿಕ್ ಆಫೀಸರ್ ವೃಂದದಿಂದ ಬಡ್ತಿ ಮೂಲಕ | ಚೀಫ್ ಸೈಂಟಿಫಿಕ್ ಆಫೀಸರ್ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸರತಕ್ಕದ್ದು.<br>ಪರಂತು ಐದು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಸೇವೆಯನ್ನು ಸಲ್ಲಿಸಿರುವ ಅಧಿಕಾರಿಗಳು ಲಭ್ಯವಿಲ್ಲದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಗಳನ್ನು ಬಡ್ತಿಗೆ ಪರಿಗಣಿಸಬಹುದು. |

**ಬಿ.ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾ.ವೈ.ಪ ಮತ್ತು ಸಮನ್ವಯ)

**PR. 74**

**SC. 25**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವ್ಯಾಪ್ತಿಯಲ್ಲಿನ ಆಸ್ಪತ್ರೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳಿಗೆ ಸಮಾಲೋಚನೆ ಮುಖಾಂತರ ಮತ್ತೊಂದು ಸುತ್ತಿನ ಸಮಾಲೋಚನೆ ನಡೆಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಪತ್ರ ಸಂಖ್ಯೆ: ಆಕುಕ 639 ಹೆಚ್‌ಎಸ್‌ಹೆಚ್ 2013, ದಿನಾಂಕ: 01.07.2015.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 38 ಹೆಚ್‌ಎಸ್‌ಹೆಚ್ 2015, ದಿನಾಂಕ: 15.07.2015.
3. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ01 ಆರ್‌ಟಿಬಿ–1/2015, ದಿನಾಂಕ: 22.07.2015.
4. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ3,4,5,6,7, 8, 9, 10, 11, 12, 13 ಮತ್ತು 14/ ಆರ್‌ಟಿಬಿ/ 2015, ದಿನಾಂಕ: 21.10.2015, 04.11.2015, 05.11.2015 ಮತ್ತು 24.11.2015.
5. ಸ್ಥಳ ಆಯ್ಕೆ ಸಮಾಲೋಚನೆಗೆ ಹಾಜರಾಗಲು ಸೂಚನಾ ಪತ್ರ ಸಂಖ್ಯೆ: ಆಕುಕ 410 ಹೆಚ್‌ಎಸ್‌ಹೆಚ್ 2015, ದಿನಾಂಕ: 23.11.2015 ಮತ್ತು 25.11.2015.
6. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 410 ಹೆಚ್‌ಎಸ್‌ಹೆಚ್ 2015, ದಿನಾಂಕ: 14.12.2015, 15.12.2015 ಮತ್ತು 16.12.2015.
7. ಆಯ್ಕೆಯಾದ ತಜ್ಞರ ಹಾಗೂ ವೈದ್ಯರಗಳ ಮನವಿ ದಿನಾಂಕ: 16.12.2015, 17.12.2015, 20.12.2015, 21.12.2015 ಮತ್ತು 23.12.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ 11 ತಜ್ಞತೆಗಳ 983 ಹಿರಿಯ ವೈದ್ಯಾಧಿಕಾರಿ/ತಜ್ಞರು, 331 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಮತ್ತು 87 ದಂತ ಆರೋಗ್ಯಾಧಿಕಾರಿಗಳನ್ನು ನೇಮಕಾತಿ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಸೂಚನೆಯಲ್ಲಿ ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ (ಹಿರಿಯ ವೈದ್ಯಾಧಿಕಾರಿ/ ತಜ್ಞರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮತ್ತು ದಂತ ಆರೋಗ್ಯಾಧಿಕಾರಿಗಳ ನೇಮಕಾತಿ) (ವಿಶೇಷ) ನೇಮಕಾತಿ ನಿಯಮಗಳು 2015ರಡಿಯಲ್ಲಿ ನೇಮಕಾತಿಗಳನ್ನು ಸಂದರ್ಶನವಿಲ್ಲದೆ ಅಭ್ಯರ್ಥಿಗಳು ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇರೆಗೆ ಆಯ್ಕೆ ಮಾಡಲು ನಿಯಮಗಳನ್ನು ರೂಪಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರಗಳಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಅರ್ಜಿಗಳು ಹಾಗೂ ಅಂತಿಮ ಆಯ್ಕೆಪಟ್ಟಿಯ ಅಧಿಸೂಚನೆಯೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (5)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳನ್ನು ಸಮಾಲೋಚನೆ ಮುಖಾಂತರ ಸ್ಥಳ ಆಯ್ಕೆ ಮಾಡಿಕೊಳ್ಳಲು ಸೂಚನಾ ಪತ್ರವನ್ನು ಹೊರಡಿಸಿ ದಿನಾಂಕ: 14.12.2015, 15.12.2015ರಂದು ತಜ್ಞರು ಹಾಗೂ ದಂತ ಆರೋಗ್ಯಾಧಿಕಾರಿಗಳಿಗೆ, ದಿನಾಂಕ: 16.12.2015ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ಸಮಾಲೋಚನೆ ಮುಖಾಂತರ ಸ್ಥಳ ಆಯ್ಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿತ್ತು. ಸಂದರ್ಶನಕ್ಕೆ ಹಾಜರಾದ ಅಭ್ಯರ್ಥಿಗಳಿಗೆ ಸ್ಥಳ ಆಯ್ಕೆ ಮಾಡಿಕೊಂಡ ಸ್ಥಳಗಳಿಗೆ ಆಯಾ ದಿನದಂದೇ ನೇಮಕಾತಿ ಅಧಿಸೂಚನೆಯನ್ನು ಮೇಲೆ ಓದಲಾದ ಕ್ರಮಸಂಖ್ಯೆ (6)ರ ರೀತ್ಯ ಅಭ್ಯರ್ಥಿಗಳಿಗೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (7)ರಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಮನವಿಯನ್ನು ಸಲ್ಲಿಸಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳು ಸ್ಥಳ ಆಯ್ಕೆ ಮಾಡಿಕೊಂಡು, ಕರ್ತವ್ಯಕ್ಕೆ ಹಾಜರಾಗದ ಅಥವಾ ರಾಜೀನಾಮೆ ಸಲ್ಲಿಸಿದ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಪಡಿಸಲಾದ ಸ್ಥಳಗಳಿಗೆ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳನ್ನು ಪರಿಗಣಿಸುವ ಮುನ್ನ ಮುಖ್ಯ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಹಾಗೂ ಸೇರುವ ಕಾಲ ವಿಸ್ತರಣೆ ಪಡೆದ ಅಭ್ಯರ್ಥಿಗಳಿಗೆ ಮತ್ತೊಂದು ಅವಕಾಶ ಕಲ್ಪಿಸಲು ಮನವಿಯನ್ನು ಸಲ್ಲಿಸಿರುತ್ತಾರೆ.

ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಾತಿಯಾದ ಬಳಿಕ ಇನ್ನು ಎಷ್ಟು ತಜ್ಞ ವೈದ್ಯರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ದಂತ ಆರೋಗ್ಯಾಧಿಕಾರಿಗಳ ಕೊರತೆಯಿದೆ ಹಾಗೂ ಆಯ್ಕೆಯಾದ ಅಭ್ಯರ್ಥಿಗಳಿಗೆ ಮತ್ತೊಂದು ಸುತ್ತಿನ ಅವಕಾಶ ಕಲ್ಪಿಸುವ ಕುರಿತು ಹಾಗೂ ತಾಯಿ–ಮಗುವಿನ ಆರೋಗ್ಯದ ರಕ್ಷಣೆ ಕುರಿತು ಮೂವರು ತಜ್ಞರ ತಂಡ ತಾಲ್ಲೂಕು ಆಸ್ಪತ್ರೆಗಳಲ್ಲಿ ಕಡ್ಡಾಯವಾಗಿ ಸ್ಥಳಾಂತರಿಸುವ ಕುರಿತಂತೆ ಮತ್ತು ಕೊರತೆಯಿರುವ ಹುದ್ದೆಗಳನ್ನು ಭರ್ತಿ ಮಾಡಲು ಕೈಗೊಳ್ಳಬೇಕಾದಂತಹ ಕ್ರಮಗಳ ಬಗ್ಗೆ ಚರ್ಚಿಸುತ್ತಾ ಇಲಾಖೆಯಲ್ಲಿ 55 ದಂತ ಆರೋಗ್ಯಾಧಿಕಾರಿ ಹುದ್ದೆಗಳು ಮಂಜೂರಾಗಿದ್ದು, ಸದರಿ ಸ್ಥಳಗಳಲ್ಲಿ ದಂತ ಕುರ್ಚಿ ಲಭ್ಯವಿಲ್ಲದ ಕಾರಣ ಸದರಿ ಸ್ಥಳಗಳ ಪೈಕಿ ಹಲವು ಪ್ರಮುಖ ಸ್ಥಳಗಳಲ್ಲಿ ದಂತವೈದ್ಯರ ಸೇವೆ ಅಲಭ್ಯತೆಯನ್ನು ಗಮನಿಸಿ ಅಂತಹ ಸ್ಥಳಗಳಿಗೆ ದಂತ ಕುರ್ಚಿಯನ್ನು ಕಲ್ಪಿಸಲು ತೀರ್ಮಾನಿಸಿ, ಈ ಹುದ್ದೆಗಳನ್ನು ಭರ್ತಿ ಮಾಡುವ ಕುರಿತಂತೆ ಸೂಚನೆಗಳನ್ನು ನೀಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ:–

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 410 ಹೆಚ್‌ಎಸ್‌ಹೆಚ್ 2015 (ಭಾಗ–3),ಬೆಂಗಳೂರು, ದಿನಾಂಕ: 07.01.2016**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಮಾನ್ಯ ಸಚಿವರ ಸೂಚನೆಯಂತೆ ಈ ಕೆಳಕಂಡಂತಹ ಕ್ರಮಗಳನ್ನು ಕೈಗೊಳ್ಳಲು ಸರ್ಕಾರದ ಅನುಮತಿ ನೀಡಲಾಗಿದೆ.

**1. ಕರ್ನಾಟಕ ಲೋಕಸೇವಾ ಆಯೋಗದಿಂದ ಅಭ್ಯರ್ಥಿಗಳಿಗೆ ಮತ್ತೊಂದು ಸುತ್ತಿನ ಸಮಾಲೋಚನೆ ಕಲ್ಪಿಸುವ ಕುರಿತು:–**

(ಅ) ಕರ್ನಾಟಕ ಲೋಕಸೇವಾ ಆಯೋಗದಿಂದ ನೂತನವಾಗಿ ಆಯ್ಕೆಗೊಂಡು ಈಗಾಗಲೇ ಸ್ಥಳನಿಯುಕ್ತಿ ಆದೇಶವನ್ನು ಪಡೆದು, ಕರ್ತವ್ಯಕ್ಕೆ ಗೈರುಹಾಜರಾದ ತಜ್ಞವೈದ್ಯರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿ ಅವರ ನೇಮಕಾತಿ ಆದೇಶವನ್ನು ನಿಯಮಾನುಸಾರ ರದ್ದುಪಡಿಸಿದ ಬಳಿಕ ಖಾಲಿ ಉಳಿಯಬಹುದಾದ ಸ್ಥಳಗಳನ್ನು ಪ್ರಕಟಿಸಿ ಈಗಾಗಲೇ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ನೇಮಕಾತಿ ಆದೇಶ ಪಡೆದ ಅಥವಾ ಸೇರುವ ಕಾಲ ವಿಸ್ತರಣೆ ಪಡೆದಂತಹ ಅಭ್ಯರ್ಥಿಗಳು ಸದರಿ ಸ್ಥಳಗಳಲ್ಲಿ ಸೇವೆ ಸಲ್ಲಿಸಲು ಬಯಸಿದ್ದಲ್ಲಿ, ಅಂತಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಅವರುಗಳು ಸಮಾಲೋಚನೆ ಮುಖಾಂತರ ಸ್ಥಳ ಆಯ್ಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಿದ ಬಳಿಕ ರದ್ದುಪಡಿಸಲಾದ ಸಂಖ್ಯೆಯಷ್ಟು ಅಭ್ಯರ್ಥಿಗಳನ್ನು ಮಾತ್ರ ಹೆಚ್ಚುವರಿ ಪಟ್ಟಿಯಿಂದ ಸಮಾಲೋಚನೆ ಮುಖಾಂತರ ಭರ್ತಿ ಮಾಡಿಕೊಳ್ಳತಕ್ಕದ್ದು. ಈ ರೀತಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಸಮಾಲೋಚನೆ ಮುಖಾಂತರ ನೇಮಕಾತಿ ಮಾಡುವಾಗ, ಯಾವ ಜಿಲ್ಲೆಯಲ್ಲಿ 20ಕ್ಕಿಂತ ಹೆಚ್ಚು ಹುದ್ದೆಗಳು ಖಾಲಿ ಇವೆಯೋ, ಅಂತಹ ಹುದ್ದೆಗಳನ್ನು ಮಾತ್ರ ಪ್ರಕಟಿಸಿ ಸಮಾಲೋಚನೆಗೆ ಅವಕಾಶ ಕಲ್ಪಿಸತಕ್ಕದ್ದು.

(ಆ) ಇಲಾಖೆಯಲ್ಲಿ 55 ದಂತ ಆರೋಗ್ಯಾಧಿಕಾರಿ ಹುದ್ದೆಗಳು ಮಂಜೂರಾಗಿದ್ದು, ಸದರಿ ಸ್ಥಳಗಳಲ್ಲಿ ದಂತ ಕುರ್ಚಿ ಲಭ್ಯವಿಲ್ಲದ ಕಾರಣ ಸದರಿ ಸ್ಥಳಗಳ ಪೈಕಿ ಹಲವು ಪ್ರಮುಖ ಸ್ಥಳಗಳಲ್ಲಿ ದಂತವೈದ್ಯರ ಸೇವೆ ಅಲಭ್ಯತೆಯನ್ನು ಗಮನಿಸಿ ಈ 55 ಸ್ಥಳಗಳಿಗೆ ಈಗಾಗಲೇ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ದಂತ ಆರೋಗ್ಯಾಧಿಕಾರಿ/ಹಿರಿಯ ದಂತ ಆರೋಗ್ಯಾಧಿಕಾರಿಗಳಿಗೆ ಮೊದಲು ಸಮಾಲೋಚನೆಗೆ ಅವಕಾಶ ಕಲ್ಪಿಸಿದ ಬಳಿಕ, ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ಸ್ಥಳ ಆಯ್ಕೆಮಾಡಿಕೊಂಡು ಸೇವೆ ಸಲ್ಲಿಸುತ್ತಿರುವ ಅಥವಾ ಸೇರುವ ಕಾಲ ವಿಸ್ತರಣೆ ಕೋರಿದ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸಿದ ಬಳಿಕ, ರದ್ದುಪಡಿಸಲಾದ ಸಂಖ್ಯೆಯಷ್ಟು ಅಭ್ಯರ್ಥಿಗಳನ್ನು ಮಾತ್ರ ಹೆಚ್ಚುವರಿ ಪಟ್ಟಿಯಿಂದ ಸಮಾಲೋಚನೆ ಮುಖಾಂತರ ಭರ್ತಿ ಮಾಡತಕ್ಕದ್ದು.

**2. ತಾಯಿ–ಮಗುವಿನ ಆರೋಗ್ಯಕ್ಕಾಗಿ ಮೂವರು ತಜ್ಞರ ತಂಡ ಒಗ್ಗೂಡಿಸುವಿಕೆ:–**

(ಅ) ಯಾವುದೇ ತಾಲ್ಲೂಕು ಆಸ್ಪತ್ರೆಯಲ್ಲಿ ತಾಯಿ–ಮಗುವಿನ ಆರೋಗ್ಯದ ಬಗ್ಗೆ ಸೂಕ್ತವಾದ ರಕ್ಷಣೆ ನೀಡುವುದಕ್ಕಾಗಿ ತುಂಬಾ ಅಗತ್ಯವಿರುವ ಮೂವರು ತಜ್ಞರ ತಂಡ ಅಂದರೆ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞರ ಹುದ್ದೆ/ಹುದ್ದೆಗಳು ಖಾಲಿಯಿದ್ದಲ್ಲಿ, ಅಂತಹ ಹುದ್ದೆಗಳು ಸಮುದಾಯ ಆರೋಗ್ಯ ಕೇಂದ್ರದಲ್ಲಿ ಮೂವರು ತಜ್ಞರ ತಂಡ ಇಲ್ಲದಿದ್ದಲ್ಲಿ ಅಥವಾ ಈಗಾಗಲೇ ಸಮಾಲೋಚನೆ ಮುಖಾಂತರ ಸ್ಥಳ ಆಯ್ಕೆ ಮಾಡಿಕೊಂಡಿದ್ದು, ಅವರ ಸ್ಥಳಗಳಿಗೆ ಮತ್ತೊಬ್ಬ ಅಭ್ಯರ್ಥಿ ಅವರ ಸ್ಥಳಕ್ಕೆ ಹಾಜರಾಗಲಿಲ್ಲವೆಂದು ಬಿಡುಗಡೆ ಹೊಂದದೆ ಇದ್ದು, ವರ್ಗಾವಣೆಗೊಂಡ ಸ್ಥಳದಲ್ಲಿ ಆ ತಜ್ಞರ ತಂಡದಿಂದ ಮೂವರು ತಜ್ಞರ ತಂಡ ಸೇರುವುದಾದಲ್ಲಿ ಅಂತಹ ತಾಲ್ಲೂಕು ಆಸ್ಪತ್ರೆಗೆ ಕಡ್ಡಾಯವಾಗಿ ಆ ತಜ್ಞರ ಸೇವೆಯನ್ನು ಸ್ಥಳಾಂತರಿಸತಕ್ಕದ್ದು.

(ಆ) ಒಂದು ವೇಳೆ ಯಾವುದೇ ತಾಲ್ಲೂಕಿನಲ್ಲಿ ಯಾವುದೇ ತಜ್ಞ ವೈದ್ಯರು ಇಲ್ಲದಿದ್ದ ಪಕ್ಷದಲ್ಲಿ ಎನ್.ಹೆಚ್.ಎಂ. ಅನುದಾನದಡಿಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಕ್ರಮವಹಿಸತಕ್ಕದ್ದು.

(ಇ) ಎಲ್ಲಾ ತಾಲ್ಲೂಕು ಆರೋಗ್ಯ ಕೇಂದ್ರಗಳಲ್ಲಿ ಮೂವರು ತಜ್ಞರ ತಂಡ (ಅಂದರೆ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞ) ಇರತಕ್ಕದ್ದು. ತದನಂತರ ಅವಶ್ಯಕತೆಗೆ ಅನುಗುಣವಾಗಿ ಇತರೆ ತಜ್ಞರ ತಂಡ ಮರುಹಂಚಿಕೆ ಮಾಡತಕ್ಕದ್ದು. ಒಂದು ವೇಳೆ ಯಾವುದೇ ತಾಲ್ಲೂಕು ಆರೋಗ್ಯ ಕೇಂದ್ರದಲ್ಲಿ ಮಂಜೂರಾದ ಹುದ್ದೆಗಳನ್ನು (ತಜ್ಞರ) ಇತರೆ ಸ್ಥಳಕ್ಕೆ ಹಂಚಿಕೆ ಮಾಡಿದ್ದಲ್ಲಿ, ಅಂತಹ ಹುದ್ದೆಗಳನ್ನು (ತಜ್ಞರ) ಎಲ್ಲಿ ಮಂಜೂರಾಗಿತ್ತೋ ಅಲ್ಲಿ ಮರುಸ್ಥಾಪಿಸತಕ್ಕದ್ದು.

3. ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಖಾಲಿಯಿರುವ ಅಂದರೆ, ಆಯ್ಕೆಯಾಗಿ ಸೇರುವ ಕಾಲ ವಿಸ್ತರಣೆ ಪಡೆದಿರುವ ಸ್ಥಳವನ್ನು ಹೊರತುಪಡಿಸಿ ಯಾವ ಸ್ಥಳವನ್ನು ಆಯ್ಕೆಮಾಡಿಕೊಳ್ಳದೆ ಖಾಲಿಯಿರುವ ಪ್ರದೇಶದಲ್ಲಿನ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಗುರುತಿಸಿ, ಸದರಿ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆ ಹೊಂದುವ ತನಕ ಗುತ್ತಿಗೆ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

4. ತಾಲ್ಲೂಕು ಮಟ್ಟದ 100 ಹಾಸಿಗೆಗಳ ಆಸ್ಪತ್ರೆಯಲ್ಲಿ ಒಂದೇ ತಜ್ಞತೆಯ ಎರಡು ಹುದ್ದೆಗಳು ಮಂಜೂರಾಗಿದ್ದಲ್ಲಿ, ಒಂದು ತಜ್ಞತೆಯ ಹುದ್ದೆಯನ್ನು ಭರ್ತಿ ಮಾಡತಕ್ಕದ್ದು. ಹೆಚ್ಚುವರಿ ಹುದ್ದೆಯನ್ನು ಇತರೆಡೆ ಅವಶ್ಯವಿರುವ ಹಾಗೂ ಖಾಲಿಯಿರುವ ಸ್ಥಳಕ್ಕೆ ಮರುಹಂಚಿಕೆ ಮಾಡತಕ್ಕದ್ದು.

5. ರಾಜ್ಯದ ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಎರಡು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮಂಜೂರಾಗಿದ್ದು, ರಾಜ್ಯ ಉಚ್ಛ ನ್ಯಾಯಾಲಯದ ಆದೇಶದ ರೀತ್ಯ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಒಂದು ಹುದ್ದೆಯನ್ನು ಮಾತ್ರ ಉಳಿಸಿ ಮತ್ತೊಂದು ಹುದ್ದೆಯನ್ನು ಸ್ಥಗಿತಗೊಳಿಸಲಾಗಿತ್ತು. ಆ ರೀತಿ ಸ್ಥಗಿತಗೊಳಿಸಲಾದ ಹುದ್ದೆಗಳನ್ನು ಮರುಸ್ಥಾಪಿಸಿ, 30 ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರಗಳಿಗೆ ಐದು ವೈದ್ಯರ ಹುದ್ದೆಗಳಿಗಿಂತ ಕಡಿಮೆ ಹುದ್ದೆಗಳು ಮಂಜೂರಾಗಿದ್ದಲ್ಲಿ ಅಂತಹ 30 ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರಕ್ಕೆ (ಒಂದು ಹಿರಿಯ ವೈದ್ಯಾಧಿಕಾರಿ, ಒಂದು ದಂತ ಆರೋಗ್ಯಾಧಿಕಾರಿ, ಮೂವರು ತಜ್ಞರ ತಂಡ) ಸ್ಥಳಾಂತರಿಸತಕ್ಕದ್ದು. ರಾಜ್ಯದ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಒಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆ (ಎಂ.ಬಿ.ಬಿ.ಎಸ್.) ಮಾತ್ರ ಇರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

PR. 75 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ದಿನಾಂಕ 10/11/2015ರಂದು ಟಿಪ್ಪು ಸುಲ್ತಾನ್ ಜಯಂತಿ ಪ್ರಯುಕ್ತ ನಡೆದ ಘಟನೆಯನ್ನು ಮ್ಯಾಜಿಸ್ಟೀರಿಯಲ್ ವಿಚಾರಣೆಗೆ (Magesterial Enquiry) ಒಪ್ಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 7 ಸಿಆರ್‌ಆರ್ 2015, ದಿನಾಂಕ 13/11/2015.
2. ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರ ಸಂಖ್ಯೆ:ಎಂಎಜಿ(1)/ಎಂಎಲ್‌ಓ/112/2015–16, ದಿನಾಂಕ: 09/12/2015.

**ಪ್ರಸ್ತಾವನೆ :**

ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ದಿನಾಂಕ 10/11/2015ರಂದು ಟಿಪ್ಪು ಸುಲ್ತಾನ್ ಜಯಂತಿ ಪ್ರಯುಕ್ತ ನಡೆದ ಘಟನೆಯ ಬಗ್ಗೆ ಮ್ಯಾಜಿಸ್ಟೀರಿಯಲ್ ವಿಚಾರಣೆ (Magesterial Enquiry) ನಡೆಸಲು ಶ್ರೀಮತಿ ಸಿ. ಶಿಖಾ, ಐಎಎಸ್, ಜಿಲ್ಲಾಧಿಕಾರಿ, ಮೈಸೂರು ಇವರನ್ನು ಮೇಲೆ ಕ್ರಮಾಂಕ(1)ರಲ್ಲಿ ಓದಲಾದ ದಿನಾಂಕ:13/11/2015ರ ಆದೇಶದಲ್ಲಿ ನೇಮಿಸಿ, ಹೊರಡಿಸಿದ ದಿನಾಂಕದಿಂದ 30ದಿನಗಳೊಳಗಾಗಿ ಮ್ಯಾಜಿಸ್ಟೀರಿಯಲ್ ವಿಚಾರಣೆಯನ್ನು ಪೂರ್ಣಗೊಳಿಸಿ, ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ(2)ರಲ್ಲಿ ಓದಲಾದ ದಿನಾಂಕ: 09/12/2015ರ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರು ಭಾರತ ಚುನಾವಣಾ ಆಯೋಗವು ದಿನಾಂಕ 24/11/2015ರಂದು ಕರ್ನಾಟಕ ವಿಧಾನ ಪರಿಷತ್ತಿಗೆ ಮೈಸೂರು ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾವಣೆ ನಡೆಸುವ ಸಲುವಾಗಿ ವೇಳಾಪಟ್ಟಿಯನ್ನು ಹೊರಡಿಸಿದ್ದು, ನೀತಿ ಸಂಹಿತೆ ಜಾರಿಯಲ್ಲಿದ್ದು, ಈ ಚುನಾವಣೆಗೆ ಸಂಬಂಧಿಸಿದಂತೆ, ರಿಟರ್ನಿಂಗ್ ಆಫೀಸರ್ ಆಗಿ ಕರ್ತವ್ಯ ನಿರ್ವಹಿಸಬೇಕಾಗಿರುವುದರಿಂದ, ಇನ್ನೂ ಒಂದು ತಿಂಗಳ ಅವಧಿಗೆ ಅಂದರೆ, ದಿನಾಂಕ:11/01/2016ರವರೆಗೆ ಅವಧಿ ವಿಸ್ತರಿಸುವಂತೆ ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಮ್ಯಾಜಿಸ್ಟೀರಿಯಲ್ ವಿಚಾರಣೆ ನಡೆಸಿ, ವರದಿ ಸಲ್ಲಿಸಲು ಕಾಲಾವಕಾಶ ವಿಸ್ತರಿಸಲು ನಿರ್ಧರಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 7 ಸಿಆರ್‌ಆರ್ 2015, ಬೆಂಗಳೂರು ದಿನಾಂಕ: 23/12/2015**

ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ದಿನಾಂಕ 10/11/2015ರಂದು ಟಿಪ್ಪು ಸುಲ್ತಾನ್ ಜಯಂತಿ ಪ್ರಯುಕ್ತ ನಡೆದ ಘಟನೆಗಳ ಬಗ್ಗೆ ಶ್ರೀಮತಿ ಸಿ. ಶಿಖಾ, ಐಎಎಸ್, ಜಿಲ್ಲಾಧಿಕಾರಿ, ಮೈಸೂರು ಇವರು ಮ್ಯಾಜಿಸ್ಟೀರಿಯಲ್ ವಿಚಾರಣೆ (Magesterial Enquiry) ನಡೆಸಿ ವರದಿ ಸಲ್ಲಿಸಲು ದಿನಾಂಕ: 11/01/2016ರವರೆಗೆ ಅವಧಿ ವಿಸ್ತರಿಸಿದೆ. ಈ ಅವಧಿಯೊಳಗೆ ಮ್ಯಾಜಿಸ್ಟೀರಿಯಲ್ ವಿಚಾರಣೆಯನ್ನು ಪೂರ್ಣಗೊಳಿಸಿ, ಸರ್ಕಾರಕ್ಕೆ ವರದಿ ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಸಿ.ಎನ್.ಮೀನಾ ನಾಗರಾಜ್**

PR. 80 ಸರ್ಕಾರದ ಉಪ ಕಾರ್ಯದರ್ಶಿ,

SC. 50 ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**ಒಳಾಡಳಿತ ಸಚಿವಾಲಯ**

**ವಿಷಯ:** ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ದಿನಾಂಕ 10/11/2015ರಂದು ಟಿಪ್ಪು ಸುಲ್ತಾನ್ ಜಯಂತಿ ಪ್ರಯುಕ್ತ ನಡೆದ ಘಟನೆಯನ್ನು ಮ್ಯಾಜಿಸ್ಟೀರಿಯಲ್ ವಿಚಾರಣೆಗೆ (Magesterial Enquiry) ಒಪ್ಪಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿ, ಕೊಡಗು ಜಿಲ್ಲೆ, ಮಡಿಕೇರಿ ಇವರು ಘಟನೆ ಕುರಿತು ಸಲ್ಲಿಸಿರುವ ವರದಿ ಪತ್ರ ಸಂಖ್ಯೆ:ಎಂಎಜಿ/180/2015–16, ದಿನಾಂಕ 10/11/2015.

2) ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ರವರಿಂದ ಘಟನೆ ಬಗ್ಗೆ ವಿಶೇಷ ವರದಿ ಪತ್ರ ಸಂಖ್ಯೆ: ಎಸ್‌ಬಿ/ವಿಶೇಷ ವರದಿ/22/2015, ದಿನಾಂಕ 10/11/2015.

3) ಡಿಜಿ ಮತ್ತು ಐಜಿಪಿ, ಬೆಂಗಳೂರುರವರ ಪತ್ರ ಸಂ:ಎಲ್&ಒ(2)/188/15–16, ದಿನಾಂಕ: 11/11/2015.

4) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 7 ಸಿಆರ್‌ಆರ್ 2015, ದಿನಾಂಕ 13/11/2015

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರ(1)ರಲ್ಲಿ ಜಿಲ್ಲಾಧಿಕಾರಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ವರದಿಯನ್ವಯ ದಿನಾಂಕ 10/11/2015ರಂದು ಪೂರ್ವಾಹ್ನ 10.15ಗಂಟೆಗೆ ಟಿಪ್ಪುಸುಲ್ತಾನ್ ಜಯಂತಿಯ ಪರ ಮತ್ತು ವಿರೋಧ ಸಂಘಟನೆಗಳ ಬೆಂಬಲಿಗರು ಬೃಹತ್ ಸಂಖ್ಯೆಯಲ್ಲಿ ಮಡಿಕೇರಿ ನಗರದ ಜನರಲ್ ತಿಮ್ಮಯ್ಯ ವೃತ್ತದ ಬಳಿ ಬಂದು ಸೇರಿ ಘೋಷಣೆಗಳನ್ನು ಕೂಗಲು ಪ್ರಾರಂಭಿಸಿದ್ದು, ಘಟನೆಯು ಹಿಂಸಾಚಾರಕ್ಕೆ ತೆರಳಿದ ಸಂದರ್ಭದಲ್ಲಿ ಪ್ರತಿಭಟನೆ ನಡೆಯುತ್ತಿದ್ದ ಸ್ಥಳದ ಅನತಿ ದೂರದಲ್ಲಿರುವ ಸರ್ಕಾರಿ ಆಸ್ಪತ್ರೆ ಸಮೀಪದಲ್ಲಿ ಶ್ರೀ ಕುಟ್ಟಪ್ಪ ಬಿನ್ ದೇವಪಂಡ ಸೋಮಯ್ಯ, 67 ವರ್ಷ, ಇಗ್ಗೋಡ್ಲು ಗ್ರಾಮ, ಸೋಮವಾರಪೇಟೆ ತಾಲ್ಲೂಕ್, ಕೊಡಗು ಜಿಲ್ಲೆ ಇವರು ಮೃತಪಟ್ಟಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಪತ್ರ(2)ರಲ್ಲಿ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ಇವರು ಘಟನೆಯ ಬಗ್ಗೆ ವರದಿ ನೀಡಿ, ದಿನಾಂಕ 10/11/2015ರಂದು ಬೆಳಿಗ್ಗೆ 10.00 ಗಂಟೆಯ ಸಮಯದಲ್ಲಿ ಮಡಿಕೇರಿಯಲ್ಲಿ ಟಿಪ್ಪು ಜಯಂತೋತ್ಸವ ಪ್ರಯುಕ್ತ ನಡೆದ ಗಲಭೆ/ಘಟನೆಯಲ್ಲಿ ಸೋಮವಾರಪೇಟೆ ತಾಲ್ಲೂಕು., ಮಾದಾಪುರ, ಇಗ್ಗೋಡ್ಲು ಗ್ರಾಮದ ವಾಸಿ ಶ್ರೀ. ಕುಟ್ಟಪ್ಪ, ವಿ.ಹೆಚ್.ಪಿ ಜಿಲ್ಲಾ ಕಾರ್ಯದರ್ಶಿರವರು ಮೃತಪಟ್ಟಿದ್ದು, ಈ ಸಂಬಂಧ ಮೃತರ ಮಗನಾದ ಶ್ರೀ. ಡಾಲಿ., ರವರು ದೂರು ನೀಡಿ ಮಡಿಕೇರಿ ನಗರ ಠಾಣೆ ಮೊ.ಸಂ 110/2015 ಕಲಂ 143, 144, 147, 148, 323, 324, 302, 149 ಐ.ಪಿ.ಸಿ ರೀತ್ಯಾ ದೂರು ದಾಖಲಾಗಿರುತ್ತದೆ.

ಟಿಪ್ಪು ಜಯಂತೋತ್ಸವದ ಸಂಬಂಧದ ಕಾರ್ಯಕ್ರಮಕ್ಕೆ ಆಗಮಿಸಿದ ಶಾಹುಲ್ ಹಮೀದ್ 22 ವರ್ಷ ಎಂಬುವವರಿಗೆ ಘಟನೆಯ ಸಂದರ್ಭದಲ್ಲಿ ಹಮ್ಮಿಯಾಲದ ಬಳಿ ಬಂದೂಕಿನಿಂದ ಗುಂಡು ಹಾರಿಸಿದಾಗ ಆತ ಗಾಯಗೊಂಡಿದ್ದು, ಆತನನ್ನು ಚಿಕಿತ್ಸೆಗಾಗಿ ಮಡಿಕೇರಿ ನಗರದ ವೈವಾಸ್ ಆಸ್ಪತ್ರೆಗೆ ದಾಖಲಿಸಿದ್ದು, ಹೆಚ್ಚಿನ ಚಿಕಿತ್ಸೆಗಾಗಿ ಮೈಸೂರು ನಗರದ ಅಪೋಲೋ ಆಸ್ಪತ್ರೆಗೆ ದಾಖಲು ಮಾಡಲಾಗಿದೆ.

ಅಲ್ಲದೆ ದಿನಾಂಕ 10/11/2015ರಂದು ಗಲಭೆಗೆ ಸಂಬಂಧಿಸಿದಂತೆ, ಜಿಲ್ಲೆಯ ವಿವಿಧ ಪೊಲೀಸ್ ಠಾಣೆಗಳಲ್ಲಿ ಮೊಕದ್ದಮೆಗಳು ದಾಖಲಾಗಿರುವ ಬಗ್ಗೆ ವರದಿ ನೀಡಿ, ಘಟನೆಯ ಬಗ್ಗೆ ವರದಿ ನೀಡಿರುತ್ತಾರೆ.

ಮೇಲ್ಕಂಡ ಘಟನೆಗಳ ವರದಿಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿದ್ದು, ಸದರಿ ಘಟನೆಯ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ನಿರ್ಧರಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 7 ಸಿಆರ್‌ಆರ್ 2015, ಬೆಂಗಳೂರು ದಿನಾಂಕ 18/11/2015**

ಸರ್ಕಾರದ ಆದೇಶ ಸಂ:ಹೆಚ್‌ಡಿ 7 ಸಿಆರ್‌ಆರ್ 2015, ದಿನಾಂಕ:13/11/2015ರಂತೆ ಮುಂದುವರೆದು, ಮೇಲ್ಕಂಡ ಪ್ರಸ್ತಾವನೆಯಲ್ಲಿ ನಮೂದಿಸಿರುವಂತೆ ಕೊಡುಗು ಜಿಲ್ಲೆ, ಮಡಿಕೇರಿಯಲ್ಲಿ ದಿನಾಂಕ 10/11/2015 ರಂದು ಟಿಪ್ಪುಸುಲ್ತಾನ್ ಜಯಂತಿ ಪ್ರಯುಕ್ತ ನಡೆದ ಕೋಮುಗಲಭೆ ಘಟನೆಗಳು ಹಾಗೂ ಶ್ರೀ ಕುಟ್ಟಪ್ಪ ಇವರು ಮೃತಪಪಟ್ಟ ಘಟನೆಯ ತನಿಖೆಯನ್ನು ಕಾರ್ಯನಿರ್ವಾಹಕ ದಂಡಾಧಿಕಾರಿ ಮೂಲಕ ಕೈಗೊಳ್ಳಲು ಸರ್ಕಾರವು ನಿರ್ಧರಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಪ್ರಕರಣದಲ್ಲಿ ಶ್ರೀಮತಿ ಸಿ. ಶಿಖಾ, ಐಎಎಸ್, ಜಿಲ್ಲಾಧಿಕಾರಿ, ಮೈಸೂರು ಇವರನ್ನು ದಿನಾಂಕ: 10/11/2015ರಂದು ಕೊಡಗು ಜಿಲ್ಲೆಯಲ್ಲಿ ನಡೆದ ಘಟನೆಯ ಬಗ್ಗೆ ತನಿಖೆ ಕೈಗೊಳ್ಳಲು ವಿಚಾರಣಾಧಿಕಾರಿಯಾಗಿ ಈ ಮೂಲಕ ನೇಮಿಸಿ ಆದೇಶಿಸಿದೆ. ವಿಚಾರಣಾಧಿಕಾರಿಗಳು ಈ ಕೆಳಕಂಡ ಅಂಶಗಳ ಬಗ್ಗೆ ದಂಡಾಧಿಕಾರಿಯ ವಿಚಾರಣೆ ಕೈಗೊಳ್ಳತಕ್ಕದ್ದು.

(1) ಶ್ರೀ ಕುಟ್ಟಪ್ಪ ಬಿನ್ ದೇವಪಂಡ ಸೋಮಯ್ಯ, 67 ವರ್ಷ, ಇಗ್ಗೋಡ್ಲು ಗ್ರಾಮ, ಸೋಮವಾರಪೇಟೆ ತಾಲ್ಲೂಕ್, ಕೊಡಗು ಜಿಲ್ಲೆ ಇವರ ಸಾವಿಗೆ ಕಾರಣಗಳು, ಘಟನಾವಳಿಗಳ ಸರಣಿ ಹಾಗೂ ಸನ್ನಿವೇಶಗಳು;

(2) ದಿನಾಂಕ 10/11/2015ರಂದು ಕೊಡಗು ಜಿಲ್ಲೆಯಲ್ಲಿ ನಡೆದ ಘಟನೆಗಳ ಬಗ್ಗೆ ವಿವಿಧ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆಗಳ ಬಗ್ಗೆ.

(3) ಜಿಲ್ಲೆಯಲ್ಲಿ ನಡೆದ ಘಟನೆಯ ಬಗ್ಗೆ ಕಾನೂನು ಮತ್ತು ಶಾಂತಿ ಸುವ್ಯವಸ್ಥೆ ಕಾಪಾಡಲು ಮುಂಜಾಗ್ರತಾ ಹಾಗೂ ಮುನ್ನೆಚ್ಚರಿಕೆಯಾಗಿ ಜಿಲ್ಲಾಡಳಿತ ಕೈಗೊಂಡ ಕ್ರಮಗಳ ಬಗ್ಗೆ.

ಸದರಿ ವಿಚಾರಣಾಧಿಕಾರಿಯು ಈ ವಿಚಾರಣೆಗೆ ಸಂಬಂಧಿಸಿದಂತೆ ಪ್ರಕಟಣೆ ನೀಡಿ, ಸಂಬಂಧಿಸಿದವರಿಗೆ ಸಮನ್ಸ್ ನೀಡಿ, ಸಾಕ್ಷ್ಯ ಮತ್ತು ದಾಖಲೆಗಳನ್ನು ಪರಿಶೀಲಿಸಿ, ಸಂಬಂಧಿಸಿದ ಸಾಕ್ಷಿದಾರರನ್ನು ಕರೆಯಿಸಿ, ದಾಖಲೆಗಳನ್ನು ಹಾಗೂ ಇತರೆ ಮಾಹಿತಿಗಳನ್ನು ಪಡೆಯಲು ಈ ಮೂಲಕ **ಅಧಿಕಾರ ನೀಡಲಾಗಿದೆ.**

ವಿಚಾರಣಾಧಿಕಾರಿಯು ಆದೇಶ ಸಂಖ್ಯೆ: ಹೆಚ್‌ಡಿ 07 ಸಿಆರ್‌ಆರ್ 2015, ದಿನಾಂಕ: 13/11/2015ನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಮ್ಯಾಜಿಸ್ಟೀರಿಯಲ್ ವಿಚಾರಣೆಯನ್ನು ಪೂರ್ಣಗೊಳಿಸಿ, ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಸಿ.ಎನ್.ಮೀನಾ ನಾಗರಾಜ್**

PR. 81 ಸರ್ಕಾರದ ಉಪ ಕಾರ್ಯದರ್ಶಿ,

SC. 50 ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂ:ಕಾಇ 439 ಎಲ್‌ಎಸ್‌ಐ 2015. ಬೆಂಗಳೂರು, ದಿನಾಂಕ:18–1–2016.**

ಸರ್ಕಾರದ ಆದೇಶ ಸಂ: ಕಾಇ 08 ಎಲ್‌ಎಸ್‌ಐ 2008, ದಿನಾಂಕ:5–12–2008ರನ್ವಯ ಪ್ರಸ್ತುತ ಕಾರ್ಮಿಕರ ರಾಜ್ಯ ವಿಮಾ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಕಿರಿಯ ತಜ್ಞರು/ಹಿರಿಯ ವಿಮಾ ವೈದ್ಯಾಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ತೋರಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ:36300–53850 ಗಳಲ್ಲಿ 13ನೇ ವರ್ಷದ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಗಳ ಹೆಸರು ಮತ್ತು ಪದನಾಮ/ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ/ಜನ್ಮ ದಿನಾಂಕ/ವಿದ್ಯಾರ್ಹತೆ. | ಸರ್ಕಾರದ ಸೇವೆಗೆ ಸೇರಿದ ದಿನಾಂಕ. | ಪ್ರಸ್ತುತ ವೇತನ ಶ್ರೇಣಿ. | 13 ನೇ ವರ್ಷದ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕ/ ಬದಲಾಗುವ ಪದನಾಮ/ ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 1 | ಡಾ. ಕೆ.ಎಲ್. ರೂಪೇಶ್ ಕುಮಾರ್, ಹಿರಿಯ ವಿಮಾ ವೈದ್ಯಾಧಿಕಾರಿ<br>ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು<br>20–07–1974<br>ಎಂ.ಬಿ.ಬಿ.ಎಸ್. ಎಂ.ಎಸ್, ಜನರಲ್ ಸರ್ಜರಿ | 22–04–2001 | 30400–51300 | 22–04–2014<br>ಹಿರಿಯ ತಜ್ಞರು,<br>(36300 – 53850) |
| 2 | ಡಾ. ಸಿ. ಆರ್. ನಟೇಶನ್,<br>ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು.<br>18–05–1974<br>ಎಂ.ಬಿ.ಬಿ.ಎಸ್. ಎಂ.ಎಸ್. ಆಪ್ತಲ್ಮಾಲಜಿ | 22–04–2001 | 30400–51300 | 22–04–2014,<br>ಹಿರಿಯ ತಜ್ಞರು,<br>(36300 – 53850) |
| 3 | ಡಾ. ಹೆಚ್. ಎಸ್. ಅನಂತ್<br>ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು<br>04–11–1974 ಎಂ.ಬಿ.ಬಿ.ಎಸ್.<br>ಎಂ.ಎಸ್. ಆರ್ಥೋಪಿಡಿಕ್ಸ್ | 20–09–2001 | 30400–51300 | 20–09–2014,<br>ಹಿರಿಯ ತಜ್ಞರು,<br>(36300 – 53850) |
| 4 | ಡಾ. ಎಂ. ಶೈಲಜ,<br>ಕಿರಿಯ ತಜ್ಞರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು<br>12–03–1972<br>ಎಂಬಿಬಿಎಸ್, ಎಂ.ಡಿ. ಪೆಥಾಲಜಿ | 22–04–2001 | 30400–51300 | 22–04–2014,<br>ಹಿರಿಯ ತಜ್ಞರು,<br>(36300 – 53850) |
| 5 | ಡಾ. ವೈಶಾಲಿ ರಂಗಸ್ವಾಮಿ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ,ಬೆಂಗಳೂರು.<br>14–05–1973 ಎಂಬಿಬಿಎಸ್, ಎಂ.ಡಿ. ಅನಸ್ತೇಷಿಯಾ. | 22–04–2001 | 30400–51300 | 22–04–2014,<br>ಹಿರಿಯ ತಜ್ಞರು,<br>(36300 – 53850) |
| 6 | ಡಾ. ಬಿ ಗೀತಾ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಆರ್.ಟಿ. ನಗರ,ಬೆಂಗಳೂರು,<br>09–08–1968<br>ಎಂಬಿಬಿಎಸ್, ಎಂಡಿ (ಪೀಡಿಯಾಟ್ರಿಕ್ಸ್), | 16–07–1999 | 30400–51300 | 16–07–2012,<br>ಹಿರಿಯ ತಜ್ಞರು,<br>(36300 – 53850) |

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಗಳ ಹೆಸರು ಮತ್ತು ಪದನಾಮ/ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ/ಜನ್ಮ ದಿನಾಂಕ/ವಿದ್ಯಾರ್ಹತೆ. | ಸರ್ಕಾರದ ಸೇವೆಗೆ ಸೇರಿದ ದಿನಾಂಕ. | ಪ್ರಸ್ತುತ ವೇತನ ಶ್ರೇಣಿ. | 13 ನೇ ವರ್ಷದ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕ/ ಬದಲಾಗುವ ಪದನಾಮ/ ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 7 | ಡಾ. ಬಿ. ಚಂಪಕ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಯಲಹಂಕ, ಬೆಂಗಳೂರು. 19–04–1965 ಎಂ.ಬಿ.ಬಿ.ಎಸ್ | 22–04–2001 | 30400–51300 | 22–04–2014, ಮುಖ್ಯ ವಿಮಾ ವೈದ್ಯಾಧಿಕಾರಿ, (36300 – 53850) |
| 8 | ಡಾ. ಕೆ. ಸುಧಾಕರ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು. 21–05–1971 ಎಂ.ಬಿ.ಬಿ.ಎಸ್. ಡಿ.ಜಿ.ಓ. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 9 | ಡಾ. ಶೀಲಾ ಶಿವಮೋಹನ್. ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ರಸಲ್‌ಮಾರ್ಕೆಟ್–2, ಬೆಂಗಳೂರು 10–08–1969 ಎಂಬಿಬಿಎಸ್, ಡಿ.ವಿ.ಡಿ. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 10 | ಡಾ. ಡಿ. ಅಂಜನ್‌ಕುಮಾರ್, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು. 18–04–1972 ಎಂ.ಬಿ.ಬಿ.ಎಸ್. ಎಂ.ಎಸ್. ಆರ್ಥೋ | 21–04–2001 | 30400–51300 | 21–04–2014, ಹಿರಿಯ ತಜ್ಞರು, (36300 – 53850) |
| 11 | ಡಾ. ಎಂ. ಪ್ರಕಾಶ್, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಲಗ್ಗೆರೆ, ಬೆಂಗಳೂರು 10–06–1973 ಎಂ.ಬಿ.ಬಿ.ಎಸ್. ಎಂ.ಎಸ್, ಜನರಲ್ ಸರ್ಜರಿ | 22–04–2001 | 30400–51300 | 23–04–2014, ಹಿರಿಯ ತಜ್ಞರು, (36300 – 53850) |
| 12 | ಡಾ. ಎಂ. ಎಂ. ಸುಮ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಲಗ್ಗೆರೆ, ಬೆಂಗಳೂರು 17–07–1975 ಎಂ.ಬಿ.ಬಿ.ಎಸ್. ಎಂ.ಎಸ್, ಓ.ಬಿ.ಜಿ | 23–04–2001 | 30400–51300 | 23–04–2014, ಹಿರಿಯ ತಜ್ಞರು, (36300 – 53850) |
| 13 | ಡಾ. ಕೆ. ಲೀಲಾವತಿ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಪೀಣ್ಯ, ಬೆಂಗಳೂರು 19–03–1972 ಎಂಬಿಬಿಎಸ್, ಡಿ.ಜಿ.ಓ. | 15–03–2000 | 30400–51300 | 15–03–2013, ಹಿರಿಯ ತಜ್ಞರು, (36300 – 53850) |
| 14 | ಡಾ. ಎ. ಬಿ. ಮಮತ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಪೀಣ್ಯ, ಬೆಂಗಳೂರು 23–12–1970 ಎಂಬಿಬಿಎಸ್, ಡಿ.ಎ. | 23–04–2001 | 30400–51300 | 23–04–2014, ಹಿರಿಯ ತಜ್ಞರು, (36300 – 53850) |
| 15 | ಡಾ. ಜೆ. ಮಾಧವಿ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಮಾದನಾಯಕನಹಳ್ಳಿ, ಬೆಂಗಳೂರು 27–06–1967 ಎಂ.ಬಿ.ಬಿ.ಎಸ್. ಡಿ.ಸಿ.ಹೆಚ್. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 16 | ಡಾ. ಎಸ್. ಆಶಾ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಮೈಸೂರು 30–05–1973 ಎಂ.ಬಿ.ಬಿ.ಎಸ್. ಎಂ.ಡಿ. ಬಯೋ ಕೆಮಿಸ್ಟ್ರಿ | 23–04–2001 | 30400–51300 | 23–04–2014, ಹಿರಿಯ ತಜ್ಞರು, (36300 – 53850) |

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಗಳ ಹೆಸರು ಮತ್ತು ಪದನಾಮ/ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ/ಜನ್ಮ ದಿನಾಂಕ/ವಿದ್ಯಾರ್ಹತೆ. | ಸರ್ಕಾರದ ಸೇವೆಗೆ ಸೇರಿದ ದಿನಾಂಕ. | ಪ್ರಸ್ತುತ ವೇತನ ಶ್ರೇಣಿ. | 13 ನೇ ವರ್ಷದ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕ/ ಬದಲಾಗುವ ಪದನಾಮ/ ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 17 | ಡಾ. ಎಸ್. ದೇಶ ಲಿಂಗೇಗೌಡ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಮೈಸೂರು 20–09–1973 ಎಂಬಿಬಿಎಸ್, ಎಂ.ಎಸ್. ಆರ್ಥೋ | 23–04–2001 | 30400–51300 | 23–04–2014, ಹಿರಿಯ ತಜ್ಞರು, (36300 – 53850) |
| 18 | ಡಾ. ಫರೀಸಾ ಅಂಬ್ರೀನ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಮೈಸೂರು. 09–03–1972 ಎಂಬಿಬಿಎಸ್, ಡಿ.ಓ.ಎಂ.ಎಸ್. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 19 | ಡಾ. ಬಿ. ನಾಗಭೂಷಣ, ಕಿರಿಯ ತಜ್ಞರು, ಕಾರಾವಿ ಆಸ್ಪತ್ರೆ, ಮೈಸೂರು. 04–07–1965 ಎಂಬಿಬಿಎಸ್, ಎಂ.ಡಿ. ಓ.ಬಿ.ಜಿ. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 20 | ಡಾ. ಪಿ. ಎಂ. ಮಾಲಾ, ಕಿರಿಯ ತಜ್ಞರು, ಕಾರಾವಿ ಆಸ್ಪತ್ರೆ, ಮೈಸೂರು 06–7–1971 ಎಂಬಿಬಿಎಸ್, ಡಿ.ಓ.ಎಂ.ಎಸ್. | 30–04–2001 | 30400–51300 | 30–04–2014, ಹಿರಿಯ ತಜ್ಞರು, (36300 – 53850) |
| 21 | ಡಾ. ಶೃತಿ ಗೌಡ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಮೈಸೂರು. 29–09–1973 ಎಂ.ಬಿ.ಬಿ.ಎಸ್. ಎಂ.ಡಿ. ಅನಸ್ತೇಷಿಯಾ | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 22 | ಡಾ. ವಿ. ಉಮೇಶ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು. 06–08–1968 ಎಂ.ಬಿ.ಬಿ.ಎಸ್. ಡಿ.ಎಂ.ಆರ್.ಡಿ. | 25–04–2001 | 30400–51300 | 25–04–2014, ಹಿರಿಯ ತಜ್ಞರು, (36300 – 53850) |
| 23 | ಡಾ. ಟಿ. ಎನ್. ಮಮತ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು 20–07–1970 ಎಂ.ಬಿ.ಬಿ.ಎಸ್.ಎಂ.ಡಿ. ಜನರಲ್ ಮೆಡಿಸಿನ್ | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 24 | ಡಾ. ಸಮೀನಾ ಬಾನು, ಕಿರಿಯ ತಜ್ಞರು, ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ ಬೆಂಗಳೂರು. 10–05–1975 ಎಂಬಿಬಿಎಸ್, ಡಿ.ಸಿ.ಹೆಚ್. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 25 | ಡಾ. ಟಿ.ಇ. ಸಾವಿತ್ರಿ. ಕಿರಿಯ ತಜ್ಞರು, ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ ಬೆಂಗಳೂರು. 02–06–1967 ಎಂಬಿಬಿಎಸ್, ಡಿ.ಜಿ.ಓ. | 26–04–2001 | 30400–51300 | 26–04–2014, ಹಿರಿಯ ತಜ್ಞರು, (36300 – 53850) |

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಗಳ ಹೆಸರು ಮತ್ತು ಪದನಾಮ/ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ/ಜನ್ಮ ದಿನಾಂಕ/ವಿದ್ಯಾರ್ಹತೆ. | ಸರ್ಕಾರದ ಸೇವೆಗೆ ಸೇರಿದ ದಿನಾಂಕ. | ಪ್ರಸ್ತುತ ವೇತನ ಶ್ರೇಣಿ. | 13 ನೇ ವರ್ಷದ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕ/ ಬದಲಾಗುವ ಪದನಾಮ/ ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 26 | ಡಾ. ಕೆ. ಜಿ. ಶ್ರೀಧರ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು. 12–08–1973 ಎಂ.ಬಿ.ಬಿ.ಎಸ್. ಎಂ.ಎಸ್. ಜನರಲ್ ಸರ್ಜರಿ | 26–04–2001 | 30400–51300 | 26–04–2014, ಹಿರಿಯ ತಜ್ಞರು, (36300 – 53850) |
| 27 | ಡಾ. ಎಲ್. ಹನುಮಂತ ರಾಜು, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು. 04–03–1973 ಎಂ.ಬಿ.ಬಿ.ಎಸ್. ಎಂ.ಎಸ್. ಆರ್ಥೋ | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 28 | ಡಾ. ಹೆಚ್.ಎಸ್. ಅಮಿತ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಶೇಷಾದ್ರಿಪುರಂ, ಬೆಂಗಳೂರು. 04–09–1974 ಎಂ.ಬಿ.ಬಿ.ಎಸ್ | 22–04–2001 | 30400–51300 | 22–04–2014, ಮುಖ್ಯ ವಿಮಾ ವೈದ್ಯಾಧಿಕಾರಿ, (36300 – 53850) |
| 29 | ಡಾ. ಪಿ. ಮಾಲತಿ, ಕಿರಿಯ ತಜ್ಞರು ಕಾರಾವಿ ನಿರ್ದೇಶನಾಲಯ, ರಾಜಾಜಿನಗರ, ಬೆಂಗಳೂರು. 30–05–1969 ಎಂ.ಬಿ.ಬಿ.ಎಸ್. ಡಿ.ಜಿ.ಓ | 30–07–1999 | 30400–51300 | 30–07–2012, ಹಿರಿಯ ತಜ್ಞರು, (36300 – 53850) |
| 30 | ಡಾ. ಹ್ಯೂಮಾ ಶಿರೀನ್, ಕಿರಿಯ ತಜ್ಞರು, ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ ಬೆಂಗಳೂರು. 10–10–1968 ಎಂಬಿಬಿಎಸ್, ಡಿ.ಜಿ.ಓ. | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 31 | ಡಾ. ಜೆ. ಸಿ. ಅರ್ಚನಾ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಸುಬ್ರಮಣ್ಯಪುರ, ಬೆಂಗಳೂರು. 10–10–1971 ಎಂಬಿಬಿಎಸ್, ಡಿಜಿಓ | 20–07–2000 | 30400–51300 | 20–07–2013, ಹಿರಿಯ ತಜ್ಞರು, (36300 – 53850) |
| 32 | ಡಾ. ಟಿ. ಮಾಲತಿ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ರಾಜಾಜಿನಗರ–1 ಬೆಂಗಳೂರು. 09–02–1974 ಎಂ.ಬಿ.ಬಿ.ಎಸ್. ಎಂ.ಡಿ. ಫಿಸಿಯಾಲಜಿ | 22–04–2001 | 30400–51300 | 22–04–2014, ಹಿರಿಯ ತಜ್ಞರು, (36300 – 53850) |
| 33 | ಡಾ. ಬಿ. ವಿ. ತೇಜಮೂರ್ತಿ, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಯಶವಂತಪುರ, ಬೆಂಗಳೂರು. 18–10–1974 ಎಂ.ಬಿ.ಬಿ.ಎಸ್.ಎಂ.ಎಸ್. ಇಎನ್‌ಟಿ | 21–04–2001 | 30400–51300 | 21–04–2014, ಹಿರಿಯ ತಜ್ಞರು, (36300 – 53850) |
| 34 | ಡಾ. ಫರೂಕ್ ಅಹಮದ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ರಾಮನಗರ. 05–04–1974 ಎಂ.ಬಿ.ಬಿ.ಎಸ್. | 22–04–2001 | 30400–51300 | 22–04–2014, ಮುಖ್ಯ ವಿಮಾ ವೈದ್ಯಾಧಿಕಾರಿ, (36300 – 53850) |

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಗಳ ಹೆಸರು ಮತ್ತು ಪದನಾಮ/ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ/ಜನ್ಮ ದಿನಾಂಕ/ವಿದ್ಯಾರ್ಹತೆ. | ಸರ್ಕಾರದ ಸೇವೆಗೆ ಸೇರಿದ ದಿನಾಂಕ. | ಪ್ರಸ್ತುತ ವೇತನ ಶ್ರೇಣಿ. | 13 ನೇ ವರ್ಷದ ಕಾಲಬದ್ಧ ಪದೋನ್ನತಿ ಜಾರಿಗೆ ಬರುವ ದಿನಾಂಕ/ ಬದಲಾಗುವ ಪದನಾಮ/ ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 35 | ಡಾ. ಎಂ. ಗೋಪಾಲ್ ಸಿಂಗ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಯಮುನಾಪುರ 11–01–1965ಎಂಬಿಬಿಎಸ್. | 25–04–2001 | 30400–51300 | 25–04–2014, ಮುಖ್ಯ ವಿಮಾ ವೈದ್ಯಾಧಿಕಾರಿ (36300 – 53850) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಲಕ್ಷ್ಮೀದೇವಿ**

ಪೀಠಾಧಿಕಾರಿ–5

ಕಾರ್ಮಿಕ ಇಲಾಖೆ (ಕಾ.ರಾ.ವಿ.ಯೋ.ವೈ.ಸೇವೆಗಳು)

PR. 381

SC. 50

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಖಾಲಿ ಇರುವ ವಿಮಾ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆ ಇವರ ಪತ್ರ ಸಂಖ್ಯೆ: ವೈದ್ಯರು/422/13–14, ದಿನಾಂಕ: 30–11–2013, 19–02–2014, 22–06–2015 ಮತ್ತು 13–07–2015

**ಪ್ರಸ್ತಾವನೆ:–**

ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ ಪತ್ರಗಳಲ್ಲಿ, ಕಾರ್ಮಿಕ ರಾಜ್ಯ ವಿಮಾ ಯೋಜನೆಗೊಳಪಟ್ಟ ಪ್ರಸ್ತುತ 21.45ಲಕ್ಷ ವಿಮಾದಾರರಿಗೆ ಹಾಗೂ ಅಂದಾಜು 100ಲಕ್ಷ ಅವರ ಕುಟುಂಬದವರಿಗೆ ಉತ್ತಮ ವೈದ್ಯಕೀಯ ಸೌಲಭ್ಯವನ್ನು ಒದಗಿಸುವ ದೃಷ್ಟಿಯಿಂದ ಪ್ರಸ್ತುತ 7 ಕಾರಾವಿ ಆಸ್ಪತ್ರೆ, 1 ರೋಗ ಪತ್ತೆ ಹಚ್ಚುವ ಕೇಂದ್ರ, 107 ಪೂರ್ಣಕಾಲಿಕ ಕಾರಾವಿ ಚಿಕಿತ್ಸಾಲಯ ಹಾಗೂ 11 ಐಎಂಪಿ ಚಿಕಿತ್ಸಾಲಯಗಳ ಮುಖಾಂತರ ವಿಮಾದಾರರು ಮತ್ತು ಅವರ ಕುಟುಂಬದವರಿಗೆ ಪೂರ್ಣ ಪ್ರಮಾಣದ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ, ಇಲಾಖೆಗೆ 580 ವೈದ್ಯಾಧಿಕಾರಿಗಳ ಹುದ್ದೆಗಳು ಮಂಜೂರಾಗಿದ್ದು, 480 ಹುದ್ದೆಗಳು ಭರ್ತಿಯಾಗಿ 100 ಹುದ್ದೆಗಳು ಪ್ರಸ್ತುತ ಖಾಲಿ ಇರುತ್ತವೆ ಎಂದು ವರದಿ ಮಾಡಿರುತ್ತಾರೆ. ಖಾಲಿ ಇರುವ ವೈದ್ಯಾಧಿಕಾರಿ ಹುದ್ದೆಗಳ ವಲಯವಾರು ಮಾಹಿತಿ ಈ ಕೆಳಗಿನಂತಿದೆ:–

| ಕ್ರ. ಸಂ. | ವಲಯದ ಹೆಸರು | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1. | ಬೆಂಗಳೂರು ವಲಯ | 23 |
| 2. | ಮೈಸೂರು ವಲಯ | 10 |
| 3. | ಶಿವಮೊಗ್ಗ ವಲಯ | 02 |
| 4. | ಬಳ್ಳಾರಿ ವಲಯ | 02 |
| 5. | ದಾವಣಗೆರೆ ವಲಯ | 03 |
| 6. | ಧಾರವಾಡ ವಲಯ | 07 |
| 7. | ತುಮಕೂರು ವಲಯ | 01 |
| 8. | ಮಂಗಳೂರು ವಲಯ | 33 |
| 9. | ಬೆಳಗಾವಿ ವಲಯ | 07 |
| 10. | ದಾಂಡೇಲಿ ವಲಯ | 08 |
| 11. | ಬಿಜಾಪುರ ವಲಯ | 02 |
| 12. | ರಾಯಚೂರು ವಲಯ | 02 |
| | **ಒಟ್ಟು** | **100** |

ಕಾರಾವಿ ನಿಗಮವು ರೂ.15,000–00ಗಳ ಮಾಸಿಕ ಗರಿಷ್ಟ ವೇತನ ಪಡೆಯುತ್ತಿರುವ ಕಾರ್ಮಿಕರನ್ನು ಕಾರಾವಿ ಯೋಜನೆಯ ವ್ಯಾಪ್ತಿಗೆ ಒಳಪಡಿಸಿರುವುದರಿಂದ ಕಾರಾವಿ ಆಸ್ಪತ್ರೆ/ಚಿಕಿತ್ಸಾಲಯಗಳಲ್ಲಿ ವೈದ್ಯಕೀಯ ಸೌಲಭ್ಯ ಪಡೆಯಲು ಬರುತ್ತಿರುವ ವಿಮಾದಾರರ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿದ್ದು, ವೈದ್ಯಕೀಯ ಸೌಲಭ್ಯವನ್ನು ಪರಿಪೂರ್ಣವಾಗಿ ನೀಡಲು ವಿಮಾ ವೈದ್ಯಾಧಿಕಾರಿಗಳ ಸೇವೆ ಅಗತ್ಯವಾಗಿರುತ್ತದೆ. ಪ್ರಸ್ತುತ ಕೆಲವೊಂದು ಕಾರಾವಿ

ಚಿಕಿತ್ಸಾಲಯಗಳಲ್ಲಿ ವಿಮಾ ವೈದ್ಯಾಧಿಕಾರಿಗಳ ಹುದ್ದೆ ಭರ್ತಿಯಾಗಿಲ್ಲದೇ ಇರುವುದರಿಂದ ಎರವಲು ಸೇವೆಯ ಮೇಲೆ ನಿಯೋಜಿಸಿ ತಾತ್ಕಾಲಿಕವಾಗಿ ವೈದ್ಯಕೀಯ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ. ಕಳೆದ ಮೂರು ವರ್ಷಗಳಲ್ಲಿ ಹೊಸದಾಗಿ 09 ಕಾರಾವಿ ಚಿಕಿತ್ಸಾಲಯಗಳನ್ನು ಪ್ರಾರಂಭಿಸಲಾಗಿದ್ದು, ಈ ಚಿಕಿತ್ಸಾಲಯಗಳಿಗೆ ಮಂಜೂರಾದ ವಿಮಾ ವೈದ್ಯಾಧಿಕಾರಿಗಳ ಹುದ್ದೆಯನ್ನು ಭರ್ತಿ ಮಾಡಲು ಸಾಧ್ಯವಾಗುತ್ತಿಲ್ಲ. ಇನ್ನೂ ಹೊಸದಾಗಿ 07 ಕಾರಾವಿ ಚಿಕಿತ್ಸಾಲಯಗಳನ್ನು ಪ್ರಾರಂಭಿಸಬೇಕಾಗಿದ್ದು, ಚಿಕಿತ್ಸಾಲಯಗಳನ್ನು ಪ್ರಾರಂಭಿಸಿದಲ್ಲಿ ವೈದ್ಯಾಧಿಕಾರಿಗಳ ಕೊರತೆ ಇನ್ನು ಹೆಚ್ಚಾಗುತ್ತದೆ. ಈ ಹಿನ್ನೆಲೆಯಲ್ಲಿ ಕಾರಾವಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ವಿಮಾ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಖಾಯಂ ಆಗಿ ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ಭರ್ತಿ ಮಾಡಲು ಸಾಕಷ್ಟು ಕಾಲಾವಕಾಶ ಅಗತ್ಯವಿರುತ್ತದೆ. ಅಲ್ಲಿಯವರೆಗೆ ವೈದ್ಯರುಗಳ ಕೊರತೆಯನ್ನು ನೀಗುವ ಸಲುವಾಗಿ ಇಲಾಖೆಯಲ್ಲಿ ವಿಭಾಗವಾರು ಖಾಲಿ ಇರುವ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಅರ್ಹತೆ ಹಾಗೂ ಮೀಸಲಾತಿಗೆ ಅನುಗುಣವಾಗಿ ವಿಮಾದಾರರು ಹಾಗೂ ಅವರ ಕುಟುಂಬದವರ ಹಿತದೃಷ್ಟಿಯಿಂದ ಗುತ್ತಿಗೆ ಆಧಾರದ ಮೇಲೆ ತುರ್ತಾಗಿ ಭರ್ತಿ ಮಾಡುವುದು ಅತೀ ಅಗತ್ಯವಾಗಿರುತ್ತದೆಯೆಂದು ಕಾರಾವಿ ನಿರ್ದೇಶಕರು ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿದೆ.

**ಸರ್ಕಾರದ ಆದೇಶ ಸಂ: ಕಾಇ 471 ಎಲ್ ಎಸ್ ಐ 2013, ಬೆಂಗಳೂರು, ದಿನಾಂಕ: 28–12–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಈ ಕೆಳಕಂಡಂತೆ ವಲಯವಾರು ಖಾಲಿ ಇರುವ 100 ವಿಮಾ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಸಂಚಿತ ವೇತನ ಮೀರದಂತೆ(ಇತರೆ ಯಾವುದೇ ಪ್ರತ್ಯೇಕ ಭತ್ಯೆಗಳಿಲ್ಲದೆ) ಮೆರಿಟ್ ಮತ್ತು ರೋಸ್ಟರ್ ಅನುಸರಿಸಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಲಾಗಿದೆ:–

(ಎ) ರಾಜ್ಯ ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ.

(ಬಿ) ಉಪ ನಿರ್ದೇಶಕರು, ವೈದ್ಯಕೀಯ ಶಿಕ್ಷಣ.

(ಸಿ) ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.

(ಡಿ) ಉಪ ನಿರ್ದೇಶಕರು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

| ಕ್ರ. ಸಂ. | ವಲಯದ ಹೆಸರು | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1. | ಬೆಂಗಳೂರು ವಲಯ | 23 |
| 2. | ಮೈಸೂರು ವಲಯ | 10 |
| 3. | ಶಿವಮೊಗ್ಗ ವಲಯ | 02 |
| 4. | ಬಳ್ಳಾರಿ ವಲಯ | 02 |
| 5. | ದಾವಣಗೆರೆ ವಲಯ | 03 |
| 6. | ಧಾರವಾಡ ವಲಯ | 07 |
| 7. | ತುಮಕೂರು ವಲಯ | 01 |
| 8. | ಮಂಗಳೂರು ವಲಯ | 33 |
| 9. | ಬೆಳಗಾವಿ ವಲಯ | 07 |
| 10. | ದಾಂಡೇಲಿ ವಲಯ | 08 |
| 11. | ಬಿಜಾಪುರ ವಲಯ | 02 |
| 12. | ರಾಯಚೂರು ವಲಯ | 02 |
| | **ಒಟ್ಟು** | **100** |

ಮೇಲ್ಕಂಡ 100 ವಿಮಾ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಮೀಸಲಾತಿ ನಿಯಮಗಳಿಗನುಸಾರವಾಗಿ ಆಯ್ಕೆ ಪಟ್ಟಿ ತಯಾರಿಸಿ, ಕೆಳಕಂಡ ಷರತ್ತುಗಳಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ತುಂಬುವುದು:–

**ಷರತ್ತುಗಳು:–**

1) ಈ ನೇಮಕಾತಿಗಳನ್ನು ಮಂಜೂರಾದ ಹುದ್ದೆಗಳಿಗೆ ಎದುರಾಗಿ ಮಾತ್ರ ತುಂಬತಕ್ಕದ್ದು.

2) ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ನೇರ ನೇಮಕಾತಿಗೆ ನಿಗದಿಪಡಿಸಿದ ಮೀಸಲಾತಿಯನ್ನು ಅನುಸರಿಸತಕ್ಕದ್ದು.

3) ಈ ಒಪ್ಪಂದದ ನೇಮಕಾತಿಯು ಕ್ರಮಬದ್ಧ ನೇಮಕಾತಿಯಾದ ತಕ್ಷಣ ಮುಕ್ತಾಯವಾಗತಕ್ಕದ್ದು.

ಈ ಆದೇಶವನ್ನು ಸಿ.ಆ.ಸು.ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 537 ಸೇನಿವ 2014, ದಿನಾಂಕ: 13–01–2015 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 83 ವೆ–9/2015, ದಿನಾಂಕ: 24–03–2015ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಲಕ್ಷ್ಮೀದೇವಿ**

ಪೀಠಾಧಿಕಾರಿ–5

ಕಾರ್ಮಿಕ ಇಲಾಖೆ (ಕಾ.ರಾ.ವಿ.ಯೋ.(ವೈ).ಸೇವೆಗಳು)

PR. 67

SC. 50

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಮಿಕ ರಾಜ್ಯ ವಿಮಾ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮಾದರಿಯಲ್ಲಿ ವಿವಿಧ ಹೆಚ್ಚುವರಿ ಭತ್ಯೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂ:ಕಾಇ 370 ಎಲ್ಎಸ್ಐ 2009,ದಿನಾಂಕ:1–10–2010.
2. ಸರ್ಕಾರದ ಅಧಿಸೂಚನೆ ಸಂ:ಕಾಇ 27 ಎಲ್ಎಸ್ಐ 2012,ದಿನಾಂಕ:9–7–2012.
3. ಸರ್ಕಾರದ ಆದೇಶ ಸಂ:ಕಾಇ 3 ಎಲ್ಎಸ್ಐ 2013,ದಿನಾಂಕ:22–10–2013.
4. ಸರ್ಕಾರದ ಆದೇಶ ಸಂ:ಕಾಇ 440 ಎಲ್ಎಸ್ಐ 2014,ದಿನಾಂಕ:31–1–2015.
5. ಸರ್ಕಾರದ ಆದೇಶ ಸಂ:ಆಕುಕ 560 ಹೆಚ್.ಎಸ್.ಹೆಚ್ 2014,ದಿನಾಂಕ:6–7–2015.
6. ಅಧ್ಯಕ್ಷರು, ಕರ್ನಾಟಕ ಸರ್ಕಾರ ಕಾರ್ಮಿಕ ರಾಜ್ಯ ವಿಮಾ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು–8 ಇವರ ಮನವಿ ದಿನಾಂಕ:19–8–2015
7. ನಿರ್ದೇಶಕರು,ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ನಿರ್ದೇಶನಾಲಯ, ಬೆಂಗಳೂರು–10 ಇವರ ಪತ್ರ ಸಂ:ಅಭಿವೃದ್ಧಿ/156/2015–16, ದಿನಾಂಕ:9–9–2015.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರಿಂದ (4) ರವರೆಗಿನ ಸರ್ಕಾರದ ಆದೇಶಗಳಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯರುಗಳಿಗೆ ಆ.ಕು.ಕ ಇಲಾಖೆಯ ಮಾದರಿಯಲ್ಲಿ ವಿವಿಧ ಭತ್ಯೆಗಳನ್ನು ಕಾಲಕಾಲಕ್ಕೆ ಪರಿಷ್ಕರಿಸಿ ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ (5)ರ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ತನ್ನ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದಗಳ ತಜ್ಞ ವೈದ್ಯರು, ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳಿಗೆ ದಿ:6–7–2015 ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪ್ರಕಾರವಾಗಿ ವಿವಿಧ ಭತ್ಯೆಗಳನ್ನು ಹೆಚ್ಚಿಸಿ ಮಂಜೂರಾತಿ ನೀಡಿರುತ್ತದೆ.

| ಸೇವಾವಧಿ | ಎಂಬಿಬಿಎಸ್ /ಬಿಡಿಎಸ್ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ.) | ಸ್ನಾತ್ತಕೋತ್ತರ ಪದವಿ/ಡಿಪ್ಲಮೋ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ.) | ಸೂಪರ್ ಸ್ಪೆಷಾಲಿಟಿ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ,) |
|---|---|---|---|
| 0–6 ವರ್ಷಗಳ ಸೇವೆ ಸಲ್ಲಿಸಿದವರಿಗೆ | **16000–00 ರಿಂದ 21000–00** | **17600–00 ರಿಂದ 42600–00** | **20800–00 ರಿಂದ 50800–00** |
| 06–13 ವರ್ಷಗಳ ಸೇವೆ ಸಲ್ಲಿಸಿದವರಿಗೆ | **17000–00 ರಿಂದ 22000–00** | **18700–00 ರಿಂದ 43700–00** | **22100–00 ರಿಂದ 52100–00** |
| 13–20 ವರ್ಷಗಳ ಸೇವೆ ಸಲ್ಲಿಸಿದವರಿಗೆ | **18000–00 ರಿಂದ 23000–00** | **19800–00 ರಿಂದ 44800–00** | **23400–00 ರಿಂದ 58400–00** |
| 20 ವರ್ಷಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದವರಿಗೆ | **18000–00 ರಿಂದ 23000–00** | **19800–00 ರಿಂದ 44800–00** | **23400–00 ರಿಂದ 58400–00** |

ಮೇಲೆ ಓದಲಾದ (6)ರ ಪತ್ರದಲ್ಲಿ ಅಧ್ಯಕ್ಷರು, , ಕರ್ನಾಟಕ ಸರ್ಕಾರ ಕಾರ್ಮಿಕ ರಾಜ್ಯ ವಿಮಾ ವೈದ್ಯಾಧಿಕಾರಿಗಳ ಸಂಘ,ಬೆಂಗಳೂರು–8 ಇವರು ಆ.ಕು.ಕ ಇಲಾಖೆಯಲ್ಲಿನ ವಿವಿಧ ವೃಂದಗಳ ತಜ್ಞ ವೈದ್ಯರು ಹಾಗೂ ದಂತ ವೈದ್ಯಾಧಿಕಾರಿಗಳಿಗೆ ದಿನಾಂಕ:6–7–2015 ರಿಂದ ಜಾರಿಗೆ ಬರುವಂತೆ ವಿವಿಧ ಭತ್ಯೆಗಳನ್ನು ಹೆಚ್ಚಿಸಿ ಮಂಜೂರಾತಿ ನೀಡಿದಂತೆ ಕಾರಾವಿ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿಗಳು ಸಹ ಆಕುಕ ಇಲಾಖೆಯ ವೈದ್ಯಾಧಿಕಾರಿಗಳಂತೆ ಸಮಾನ ವಿದ್ಯಾರ್ಹತೆ/ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಕಾರಾವಿ ಇಲಾಖೆಯ ವೈದ್ಯಾಧಿಕಾರಿಗಳಿಗೂ ಆಕುಕ ಇಲಾಖೆಯು ಜಾರಿಗೊಳಿಸಿದ ದಿನಾಂಕದಿಂದಲೇ ವಿಶೇಷ ಭತ್ಯೆಗಳನ್ನು ಹೆಚ್ಚಿಸಿ ಮಂಜೂರು ಮಾಡಿಕೊಡುವಂತೆ ಕೋರಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ.ವೈ.ಸೇವೆಗಳ ನಿರ್ದೇಶಾನಾಲಯ,ಬೆಂಗಳೂರು ಇವರು ಮೇಲೆ ಓದಲಾದ (7)ರ ಪತ್ರದಲ್ಲಿ ಅಧ್ಯಕ್ಷರು,, ಕರ್ನಾಟಕ ಸರ್ಕಾರ ಕಾರ್ಮಿಕ ರಾಜ್ಯ ವಿಮಾ ವೈದ್ಯಾಧಿಕಾರಿಗಳ ಸಂಘ,ಬೆಂಗಳೂರು–8 ಇವರು ದಿನಾಂಕ:19–8–2015ರಲ್ಲಿ ಕೋರಲಾದ ಮನವಿಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಪ್ರಸ್ತಾಪಿಸಿರುತ್ತಾರೆ.

ರಾಜ್ಯ ಸರ್ಕಾರವು ಕಾರಾವಿ ನಿಗಮದೊಂದಿಗೆ ಮಾಡಿಕೊಂಡ ಒಪ್ಪಂದದ ಅನುಸಾರ ವಿಮಾದಾರರಿಗೆ ಹಾಗೂ ಅವರ ಕುಟುಂಬದವರಿಗೆ ಪೂರ್ಣ ಪ್ರಮಾಣದ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸುವ ಹೊಣೆಗಾರಿಕೆ ರಾಜ್ಯ ಸರ್ಕಾರದ್ದಾಗಿದೆ. ಇದಕ್ಕಾಗಿ ಕಾರಾವಿ ನಿಗಮವು ಇಲಾಖೆಯು ಮಾಡುವ ಒಟ್ಟು ವೆಚ್ಚದಲ್ಲಿ ಶೇಕಡಾ 87.50 ರಷ್ಟು ಮೊತ್ತವನ್ನು ರಾಜ್ಯ ಸರ್ಕಾರಕ್ಕೆ ಪುನರ್‌ಭರಣ ಮಾಡುತ್ತಿದ್ದು, ರಾಜ್ಯ ಸರ್ಕಾರದ ಪಾಲು ಶೇಕಡಾ 12.50 ರಷ್ಟು ಮಾತ್ರವಾಗಿರುತ್ತದೆ.

ಕಾರಾವಿ ಇಲಾಖೆಯು ಪ್ರಸ್ತುತ 21.50 ಲಕ್ಷ ವಿಮಾದಾರರಿಗೆ ಹಾಗೂ ಅಂದಾಜು 107 ಲಕ್ಷ ಅವರ ಕುಟುಂಬದವರಿಗೆ 07 ಕಾರಾವಿ ಆಸ್ಪತ್ರೆ, 109 ಕಾರಾವಿ ಚಿಕಿತ್ಸಾಲಯ, 01 ರೋಗ ಪತ್ತೆ ಹಚ್ಚುವ ಕೇಂದ್ರ ಹಾಗೂ 11 ಐ.ಎಂ.ಪಿ, ಪದ್ದತಿ ಚಿಕಿತ್ಸಾಲಯದ ಮುಖಾಂತರ ಪೂರ್ಣ ಪ್ರಮಾಣದ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲಾಗುತ್ತಿದೆ. ಇಲಾಖೆಯ ವಿಮಾ ವೈದ್ಯಾಧಿಕಾರಿ/ತಜ್ಞ ವೈದ್ಯರು/ದಂತ ವೈದ್ಯರು ಸಹ ಆಕುಕ ಇಲಾಖೆಯ ವೈದ್ಯಾಧಿಕಾರಿಗಳು/ತಜ್ಞ ವೈದ್ಯರು/ದಂತ ವೈದ್ಯರಂತೆ ಸಮಾನ ವಿದ್ಯಾರ್ಹತೆ ಒಂದೆ ಆಯ್ಕೆ ಮಾನದಂಡವನ್ನು ಹೊಂದಿರುತ್ತಾರೆ. ಇವರು ಸಹ ಕೆ.ಪಿ.ಎಸ್.ಸಿ ಮೂಲಕ ನೇಮಕಾತಿಗೊಂಡು ಸಮಾನ ವೇತನ ಶ್ರೇಣಿ/ಭತ್ಯೆಗಳನ್ನು ಹೊಂದಿರುತ್ತಾರೆ. ಹಾಗೂ ಕೆ.ಸಿ.ಎಸ್.ಆರ್. ನಿಯಮಾವಳಿಯ ನಿಯಮಗಳಿಗೆ ಒಳಪಟ್ಟಿರುತ್ತಾರೆ. ಈ ಹಿಂದೆ ಆಕುಕ ಇಲಾಖೆಯ ವೈದ್ಯಾಧಿಕಾರಿಗಳಿಗೆ ವಿಶೇಷ ಭತ್ಯೆಗಳನ್ನು ಮಂಜೂರು ಮಾಡಲಾದಂತೆ, ಕಾರಾವಿ ಇಲಾಖೆಯ ವೈದ್ಯಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂ: ಕಾಇ 370 ಎಲ್ಎಸ್ಐ 2009,ದಿ:1–10–2010, ಸಂ:ಕಾಇ 27 ಎಲ್ಎಸ್ಐ 2012,ದಿ:9–7–2012,ಸಂ:ಕಾಇ 3 ಎಲ್ಎಸ್ಐ 2013, ದಿ:22–10–2013 ಮತ್ತು ಸಂ:ಕಾಇ 440 ಎಲ್ಎಸ್ಐ 2014,ದಿ:31–1–2015ರ ಆದೇಶಗಳಲ್ಲಿ ಕಾಲಕಾಲಕ್ಕೆ ವಿಶೇಷ ಭತ್ಯೆಗಳನ್ನು

ಪರಿಷ್ಕರಿಸಿ ಮಂಜೂರಾತಿ ಮಾಡಲಾಗಿರುತ್ತದೆ. ಪ್ರಸ್ತುತ ಸರ್ಕಾರದ ಆದೇಶ ಸಂ: ಆಕುಕ 560 ಹೆಚ್. ಎಸ್. ಹೆಚ್. 2014,ದಿ:6–7–2015ರಲ್ಲಿ ಆಕುಕ ಇಲಾಖೆಯ ವೈದ್ಯಾಧಿಕಾರಿಗಳಿಗೆ ಹೆಚ್ಚುವರಿ ಭತ್ಯೆಯನ್ನು ಮಂಜೂರು ಮಾಡಲಾಗಿದ್ದು, ಈ ಸೌಲಭ್ಯವನ್ನು ಇಲಾಖೆಯ ವೈದ್ಯಾಧಿಕಾರಿಗಳಿಗೆ ವಿಸ್ತರಿಸದೇ ಇದ್ದಲ್ಲಿ ಭತ್ಯೆಗಳಲ್ಲಿ ತಾರತಮ್ಯತೆ ಉಂಟಾಗುತ್ತದೆ.

ಕಾರಾವಿ ಇಲಾಖೆಗೆ ಮಂಜೂರಾದ ಹಾಗೂ ಕಾರ್ಯ ನಿರತ ವಿಮಾ ವೈದ್ಯಾಧಿಕಾರಿ/ತಜ್ಞ ವೈದ್ಯರು/ದಂತ ವೈದ್ಯಾಧಿಕಾರಿಗಳ ವಿವರ ಹಾಗೂ ಆಕುಕ ಇಲಾಖೆಯು ಮಂಜೂರು ಮಾಡಲಾದ ಹೆಚ್ಚುವರಿ ಭತ್ಯೆಯನ್ನು ಇಲಾಖೆಯ ವೈದ್ಯರುಗಳಿಗೆ ಮಂಜೂರಾತಿ ಮಾಡಿದ್ದಲ್ಲಿ ಉಂಟಾಗುವ ವೆಚ್ಚದ ವಿವರಗಳು ಈ ಕೆಳಗಿನಂತಿದೆ:–

| ಕ್ರ. ಸಂ. | ಪದನಾಮ | ಮಂಜೂರಾದ ಹುದ್ದೆಗಳ ಸಂಖ್ಯೆ. | ಕಾರ್ಯನಿರತ ಹುದ್ದೆಗಳ ಸಂಖ್ಯೆ. |
|---|---|---|---|
| 1 | ನಿರ್ದೇಶಕರು | 01 | 01 |
| 2 | ಉಪ ನಿರ್ದೇಶಕರು(ಆಡಳಿತ) | 01 | 01 |
| 3 | ಉಪ ನಿರ್ದೇಶಕರು(ಕಾರ್ಯಕ್ರಮ) | 01 | 01 |
| 4 | ವೈದ್ಯಾಧಿಕಾರಿಗಳು | 586 | 374 |
| 5 | ದಂತ ವೈದ್ಯಾಧಿಕಾರಿಗಳು | 08 | 03 |
| | **ಒಟ್ಟು=** | **597** | **380** |

**<u>ಹೆಚ್ಚುವರಿ ಭತ್ಯೆಯ ವೆಚ್ಚದ ವಿವರಗಳು:–</u>**

| ಕ್ರ. ಸಂ. | ಪದವಿ | ಕಾರ್ಯನಿರತ ಹುದ್ದೆಗಳ ಸಂಖ್ಯೆ. | ಹೆಚ್ಚುವರಿ ಭತ್ಯೆ X 12 ತಿಂಗಳು | ತಗಲುವ ಒಟ್ಟು ವಾರ್ಷಿಕ ಮೊತ್ತ. |
|---|---|---|---|---|
| 1 | ಎಂಬಿಬಿಎಸ್ | 123 | 5000 X 12 | 7380000–00 |
| 2 | ಸ್ನಾತಕೋತ್ತರ ಪದವಿ/ಡಿಪ್ಲಮೋ | 244 | 25000 X 12 | 73200000–00 |
| 3 | ಸೂಪರ್ ಸ್ಪೆಷಾಲಿಟಿ | 07 | 35000 X 12 | 2940000–00 |
| 4 | ದಂತ ಶಸ್ತ್ರ ಚಿಕಿತ್ಸಕರು | 03 | 25000 X 12 | 900000–00 |
| 5 | ನಿರ್ದೇಶಕರು/ಉಪನಿರ್ದೇಶಕರು (ಆಡಳಿತ)/(ಕಾರ್ಯಕ್ರಮ) | 03 | 25000 X 12 | 900000–00 |
| | **ಒಟ್ಟು=** | **380** | | **85320000–00** |

ಮೇಲೆ ವಿವರಿಸಲಾದಂತೆ ಆಕುಕ ಇಲಾಖೆಯ ವೈದ್ಯಾಧಿಕಾರಿಗಳಿಗೆ/ದಂತ ವೈದ್ಯರಿಗೆ ಮಂಜೂರಾತಿ ನೀಡಿದ ಹೆಚ್ಚುವರಿ ಭತ್ಯೆಯನ್ನು ಪ್ರಸ್ತುತ ಕಾರಾವಿ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳಿಗೆ/ದಂತ ವೈದ್ಯರಿಗೆ ವಿಸ್ತರಿಸಿದಲ್ಲಿ ವಾರ್ಷಿಕ ರೂ:8,53,20,000/– ವೆಚ್ಚವಾಗುತ್ತದೆ, ಇದರಲ್ಲಿ ಕಾರಾವಿ ನಿಗಮದ ಪಾಲು ರೂ:7,46,55,000/– ರಾಜ್ಯ ಸರ್ಕಾರದ ಪಾಲು ರೂ:1,06,65,000/– ಮಾತ್ರವಾಗುತ್ತದೆ. ಕಾರಾವಿ ನಿಗಮವು ಹೆಚ್ಚುವರಿ ಭತ್ಯೆಯ ಶೇ.87.50 ರಷ್ಟು ಮೊತ್ತವನ್ನು ರಾಜ್ಯ ಸರ್ಕಾರಕ್ಕೆ ಪುನರ್ ಭರಣ ಮಾಡುವುದರಿಂದ ರಾಜ್ಯ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುವುದಿಲ್ಲ. 2015–16ನೇ ಸಾಲಿನ ಆಯವ್ಯಯ ತಯಾರಿಕೆಯಲ್ಲಿ ಸದರಿ ವೆಚ್ಚವನ್ನು ಸೇರಿಸಿ ಅಂದಾಜು ಪಟ್ಟಿಯನ್ನು ತಯಾರಿಸಿಲ್ಲದಿರುವುದರಿಂದ, ಈ ಹೆಚ್ಚುವರಿ ಮೊತ್ತವನ್ನು ಭರಿಸಲು ಇಲಾಖೆಗೆ ಪೂರಕ ಅಂದಾಜು–3ರಲ್ಲಿ ಅನುದಾನ ಒದಗಿಸುವಂತೆ ಕೋರಿರುತ್ತಾರೆ.

ಕಾರಾವಿ ಇಲಾಖೆಯಲ್ಲಿ 1985 ರಿಂದ ಸುಮಾರು 586 ವಿಮಾ ವೈದ್ಯಾಧಿಕಾರಿಗಳು, ತಜ್ಞ ವೈದ್ಯರು/ದಂತ ವೈದ್ಯರು ನೇರ ನೇಮಕಾತಿಯಿಂದ ಆಯ್ಕೆಗೊಂಡು ಕಾರ್ಯ ನಿರ್ವಹಿಸುತ್ತಿದ್ದಾರೆ. 2012ನೇ ಸಾಲಿನಲ್ಲಿ ಕೆ.ಪಿ.ಎಸ್.ಸಿ ಯಿಂದ ಇಲಾಖೆಗೆ ನೇರ ನೇಮಕಾತಿಯಿಂದ ಅಯ್ಕೆಗೊಂಡ 95 ವೈದ್ಯರಲ್ಲಿ ಕೇವಲ 64 ಮಂದಿ ವೈದ್ಯರು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರಿಗೆ ನೀಡುತ್ತಿರುವ ಸಂಬಳ ಕಡಿಮೆ ಇರುವ ಕಾರಣದಿಂದ ಇಲಾಖೆಯಲ್ಲಿ ಸೇವೆ ಸಲ್ಲಿಸುವ ಬಗ್ಗೆ ಆಕರ್ಷಣೆ ಕಳೆದುಕೊಂಡು ಸ್ವ–ಇಚ್ಚಾ ನಿವೃತ್ತಿ ಹೊಂದುತ್ತಿದ್ದಾರೆ. ಪ್ರಸ್ತುತ ಇಲಾಖೆಯಲ್ಲಿ 380 ವೈದ್ಯಾದಿಕಾರಿಗಳು ಮಾತ್ರ ಕಾರ್ಯ ನಿರ್ವಹಿಸುತ್ತಿದ್ದಾರೆ. ಖಾಲಿ ಇರುವ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ತುಂಬಲು ಅರ್ಜಿ ಆಹ್ವಾನಿಸಿದರೂ ಸಹ ಯಾರು ಮುಂದೆ ಬರುತ್ತಿಲ್ಲ. ಈಗ ವೈದ್ಯರುಗಳ ತೀವ್ರ ಕೊರತೆ ಇದ್ದು, ವಿಮಾದಾರರ ಸಂಖ್ಯೆಯು ಹೆಚ್ಚಾಗುತ್ತಿರುವುದರಿಂದ ಹಾಲಿ ಕಾರ್ಯ ನಿರ್ವಹಿಸುತ್ತಿರುವ ವಿಮಾ ವೈದ್ಯಾಧಿಕಾರಿಗಳು, ತಜ್ಞ ವೈದ್ಯರು/ದಂತ ವೈದ್ಯರುಗಳ ಕಾರ್ಯ ವ್ಯಾಪ್ತಿ, ಕೆಲಸದ ಒತ್ತಡ ಹಾಗೂ ಹೊಣೆಗಾರಿಕೆ ಹೆಚ್ಚಾಗಿರುತ್ತದೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ಆಕುಕ 560 ಹೆಚ್.ಎಸ್.ಹೆಚ್. 2014, ದಿನಾಂಕ:6–7–2015 ರ ಆದೇಶದಲ್ಲಿ ಆಕುಕ ಇಲಾಖೆಯ ವೈದ್ಯಾಧಿಕಾರಿಗಳಿಗೆ ಮಂಜೂರಾತಿ ಮಾಡಲಾದ ಭತ್ಯೆಗಳನ್ನು ಅವರುಗಳಿಗೆ ನೀಡಲಾದ ದಿ:6–7–2015ರಿಂದಲೇ ಜಾರಿಗೆ ಬರುವಂತೆ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳಿಗೆ ವಿಸ್ತರಿಸುವ ಕುರಿತು ಸೂಕ್ತ ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಕಾರಾವಿ ನಿರ್ದೇಶಕರು ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 330 ಎಲ್ಎಸ್ಐ 2015,ಬೆಂಗಳೂರು,ದಿನಾಂಕ:13–01–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು ಇಲಾಖೆಯ ನಿರ್ದೇಶಕರು / ಉಪನಿರ್ದೇಶಕರು (ಆಡಳಿತ) / (ಕಾರ್ಯಕ್ರಮ) ಇವರುಗಳು ತಜ್ಞ ವೈದ್ಯರು / ವೈದ್ಯಾಧಿಕಾರಿಗಳೆ ಅಗಿದ್ದು, ಅವರ ಆಡಳಿತಾತ್ಮಕ ಹುದ್ದೆಯ ಕರ್ತವ್ಯಗಳ ಜೊತೆಗೆ ವೈದ್ಯರುಗಳ ಕರ್ತವ್ಯವನ್ನು ಕೂಡ ನಿರ್ವಹಿಸುತ್ತಿರುವುದರಿಂದ ಕಾರಾವಿ ಇಲಾಖೆಯ ವಿವಿಧ ವೃಂದಗಳ ವೈದ್ಯಾಧಿಕಾರಿಗಳು,ತಜ್ಞ ವೈದ್ಯರು / ದಂತ ವೈದ್ಯರುಗಳಿಗೆ ದಿನಾಂಕ:06–07–2015 ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪ್ರಕಾರವಾಗಿ ಹೆಚ್ಚುವರಿ ವಿವಿಧ ಭತ್ಯೆಗಳನ್ನು ಹೆಚ್ಚಿಸಿ ಮಂಜೂರಾತಿ ನೀಡಲಾಗಿದೆ.

| ಸೇವಾವಧಿ | ಎಂಬಿಬಿಎಸ್ /ಬಿಡಿಎಸ್ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ.) | ಸ್ನಾತ್ತಕೋತ್ತರ ಪದವಿ/ಡಿಪ್ಲಮೋ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ.) | ಸೂಪರ್ ಸ್ಪೆಷಾಲಿಟಿ ವಿದ್ಯಾರ್ಹತೆ ಹೊಂದಿರುವವರಿಗೆ (ಮಾಸಿಕ ರೂ.) |
|---|---|---|---|
| 0–6 ವರ್ಷಗಳ ಸೇವೆ ಸಲ್ಲಿಸಿದವರಿಗೆ | 16,000–00 ರಿಂದ 21,000–00 | 17,600–00 ರಿಂದ 42,600–00 | 20,800–00 ರಿಂದ 50,800–00 |
| 06–13 ವರ್ಷಗಳ ಸೇವೆ ಸಲ್ಲಿಸಿದವರಿಗೆ | 17,000–00 ರಿಂದ 22,000–00 | 18,700–00 ರಿಂದ 43,700–00 | 22,100–00 ರಿಂದ 52,100–00 |
| 13–20 ವರ್ಷಗಳ ಸೇವೆ ಸಲ್ಲಿಸಿದವರಿಗೆ | 18,000–00 ರಿಂದ 23,000–00 | 19,800–00 ರಿಂದ 44,800–00 | 23,400–00 ರಿಂದ 58,400–00 |
| 20 ವರ್ಷಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದವರಿಗೆ | 18,000–00 ರಿಂದ 23,000–00 | 19,800–00 ರಿಂದ 44,800–00 | 23,400–00 ರಿಂದ 58,400–00 |

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 676 ಸೇ–2/2015, ದಿನಾಂಕ:2–11–2015ರಲ್ಲಿ ನೀಡಿರುವ ಸಹಮತದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಲಕ್ಷ್ಮೀದೇವಿ**

ಪೀಠಾಧಿಕಾರಿ–5

ಕಾರ್ಮಿಕ ಇಲಾಖೆ (ಕಾ.ರಾ.ವಿ.ಯೋ.ವೈ.ಸೇವೆಗಳು)

PR. 73

SC. 200

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರ್ಮಿಕ ರಾಜ್ಯ ವಿಮಾ ನಿಗಮದ ಹೊಸ ನಾರಮ್ಸ್ ಪ್ರಕಾರ ಕಾರಾವಿ ಆಸ್ಪತ್ರೆಗಳಿಗೆ ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಕಾರಾವಿ.ಯೋ. ವೈ. ಸೇವೆಗಳು, ಬೆಂಗಳೂರು ಇವರ ಪತ್ರ ಸಂ:ಅಭಿವೃದ್ಧಿ/ 348/2014–15, ದಿನಾಂಕ:27–02–2015 ಮತ್ತು 6–7–2015

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು, ಬೆಂಗಳೂರು ಇವರು ಪ್ರಸ್ತುತ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಿರಿಯ/ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳು ಕಾರಾವಿ ನಿಗಮದ ನಾರಮ್ಸ್‌ಗಿಂತ ಅತಿ ಕಡಿಮೆ ಸಂಖ್ಯೆಯಲ್ಲಿದ್ದು, ವಿಮಾ ರೋಗಿಗಳಿಗೆ ಗರಿಷ್ಠ ಮಟ್ಟದಲ್ಲಿ ಪ್ರಯೋಗಶಾಲಾ ಸೌಲಭ್ಯವನ್ನು ಒದಗಿಸುವುದು ಕಷ್ಟಕರವಾಗಿದೆ. ಅಲ್ಲದೆ ಪ್ರಯೋಗಶಾಲಾ ಸೌಲಭ್ಯವನ್ನು ಪಡೆಯಲು ದಿನದಿಂದ ದಿನಕ್ಕೆ ಬರುತ್ತಿರುವ ವಿಮಾ ರೋಗಿಗಳ ಸಂಖ್ಯೆ ಗಣನೀಯವಾಗಿ ಏರಿಕೆಯಾಗಿದ್ದು, ಹಾಲಿ ಕಾರ್ಯ ನಿರ್ವಹಿಸುತ್ತಿರುವ ಪ್ರಯೋಗಶಾಲಾ ತಂತ್ರಜ್ಞರಿಗೆ ಕೆಲಸದ ಒತ್ತಡ ಅತಿ ಹೆಚ್ಚಾಗಿರುವುದರಿಂದ ರಾಜ್ಯದ ಎಲ್ಲಾ ಕಾರಾವಿ ಆಸ್ಪತ್ರೆಗಳಿಗೆ ಕಾರಾವಿ ನಿಗಮದ ನಾರಮ್ಸ್ ಪ್ರಕಾರ ಕಿರಿಯ/ಹಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಲಾದ ಪ್ರಕಾರ ಸೃಜಿಸುವಂತೆ ಕೋರಿರುತ್ತಾರೆ.

ಪ್ರಸ್ತುತ ಇಲಾಖೆಯು ರಾಜ್ಯದಲ್ಲಿ 21.45 ಲಕ್ಷ ವಿಮಾದಾರರಿಗೆ ಹಾಗೂ ಅಂದಾಜು 100.00 ಲಕ್ಷ ಅವರ ಕುಟುಂಬದವರಿಗೆ 09 ಕಾರಾವಿ ಆಸ್ಪತ್ರೆ 107 ಪೂರ್ಣಕಾಲಿಕ ಕಾರಾವಿ ಚಿಕಿತ್ಸಾಲಯ,01 ರೋಗ ಪತ್ತೆ ಹಚ್ಚುವ ಕೇಂದ್ರ ಹಾಗೂ 11 ಐ.ಎಂ.ಪಿ ಪದ್ಧತಿ ಮುಖಾಂತರ ಪೂರ್ಣ ಪ್ರಮಾದ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲಾಗುತ್ತಿದೆ. ಪ್ರಸಕ್ತ ಕಾರಾವಿ ಆಸ್ಪತ್ರೆಗಳಿಗೆ ಮಂಜೂರಾಗಿರುವ ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳ ವಿವರ ಕೆಳಕಂಡಂತಿದೆ:–

| ಕ್ರ.ಸಂ. | ಪದನಾಮ | ಮಂಜೂರಾದ ಹುದ್ದೆಗಳ ಸಂಖ್ಯೆ. | ಕಾರ್ಯ ನಿರತ ಹುದ್ದೆಗಳ ಸಂಖ್ಯೆ. | ಖಾಲಿ ಹುದ್ದೆಗಳ ಸಂಖ್ಯೆ. |
|---|---|---|---|---|
| 01 | ಹಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 03 | 02 | 01 |
| 02 | ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 29 | 22 | 07 |

ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿ ಅನುಸಾರ ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಶೇ.50 ರಷ್ಟು ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಹಾಗೂ ಶೇ. 50 ರಷ್ಟು ಹುದ್ದೆಗಳನ್ನು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಿರಿಯ ಪ್ರಯೋಗಶಾಲಾ ತಂತ್ರಜ್ಞರಿಗೆ ಪದೋನ್ನತಿ ನೀಡುವ ಮುಖಾಂತರ ಭರ್ತಿ ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ. ಅದರಂತೆ ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು ಶೇ.75ರ ಅನುಪಾತದಲ್ಲಿ ನೇಮಕಾತಿ ಮುಖಾಂತರ ಹಾಗೂ ಶೇ.25 ರಷ್ಟು ಹುದ್ದೆಗಳನ್ನು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪ್ರಯೋಗ ಶಾಲಾ ಸಹಾಯಕರಿಂದ ಭರ್ತಿ ಮಾಡಲು ಅವಕಾಶವಿರುತ್ತದೆ. ಕಾರಾವಿ ನಿಗಮವು ದಿನಾಂಕ: 1–5–2010 ರಿಂದ ಅನ್ವಯವಾಗುವಂತೆ ವೇತನ ಮಿತಿಯನ್ನು ರೂ:15000–00 ಗರಿಷ್ಠ ವೇತನ ಪಡೆಯುತ್ತಿರುವ ಕಾರ್ಮಿಕರನ್ನು ಕಾರಾವಿ ಯೋಜನೆ ವ್ಯಾಪ್ತಿಗೆ ಒಳಪಡಿಸಿರುತ್ತಾರೆ. ಹಾಗೂ ರಾಜ್ಯ ಸರ್ಕಾರವು ದಿ:16–3–2011 ರಿಂದ ಜಾರಿಗೆ ಬರುವಂತೆ ಖಾಸಗಿ ಶಿಕ್ಷಣ ಸಂಸ್ಥೆ/ವೈದ್ಯಕೀಯ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಯೋಜನೆಯ ವ್ಯಾಪ್ತಿಗೆ ಒಳಪಡಿಸಿರುವುದರಿಂದ ರಾಜ್ಯದಲ್ಲಿ ವಿಮಾದಾರರ ಸಂಖ್ಯೆ ಗಣನೀಯವಾಗಿ ಏರಿಕೆಯಾಗಿದೆ. ಇದರಿಂದಾಗಿ ಆಸ್ಪತ್ರೆಗಳಲ್ಲಿ ಹೊರ ರೋಗಿಗಳ ಸಂಖ್ಯೆಯು ಸಹ ಏರಿಕೆಯಾಗಿರುತ್ತದೆ. ಈ ಕಾರಣದಿಂದ ಕಾರಾವಿ ನಿಗಮದ ನಾರಮ್ಸ್ ಪ್ರಕಾರ ಕಾರಾವಿ ಆಸ್ಪತ್ರೆಗಳಿಗೆ ಮಂಜೂರು ಮಾಡಬಹುದಾದ ಕಿರಿಯ/ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳ ವಿವರಗಳನ್ನು ಈ ಕೆಳಗಿನಂತೆ ಒದಗಿಸಿರುತ್ತಾರೆ.

1. **ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳು:–**

| ಕ್ರ.ಸಂ. | ಕಾರಾವಿ ಆಸ್ಪತ್ರೆಗಳ ಹೆಸರು | ಪ್ರಸ್ತುತ ಮಂಜೂರಾದ ಹುದ್ದೆಗಳ ಸಂಖ್ಯೆ | ಕಾರಾವಿ ನಿಗಮದ ನಾರಮ್ಸ್ ಪ್ರಕಾರ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ. | ಪ್ರಸ್ತುತ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ. |
|---|---|---|---|---|
| 1 | ಇಂದಿರಾನಗರ,ಬೆಂಗಳೂರು | 02 | 05 | 03 |
| 2 | ಮೈಸೂರು | – | 03 | 03 |

| | | | | |
|---|---|---|---|---|
| 3 | ಮಂಗಳೂರು | – | 03 | 03 |
| 4 | ದಾವಣಗೆರೆ | – | 02 | 02 |
| 5 | ಹುಬ್ಬಳ್ಳಿ | 01 | 02 | 01 |
| 6 | ಬೆಳಗಾವಿ | – | 02 | 02 |
| 7 | ದಾಂಡೇಲಿ | – | 01 | 01 |
| 8 | ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ. | – | 01 | 01 |
| | ಒಟ್ಟು= | **03** | **19** | **16** |

2. ಕಿರಿಯ ಪ್ರಯೋಗಶಾಲಾ ತಂತ್ರಜ್ಞರು:–

| ಕ್ರ.ಸಂ. | ಕಾರಾವಿ ಆಸ್ಪತ್ರೆಗಳ ಹೆಸರು | ಪ್ರಸ್ತುತ ಮಂಜೂರಾದ ಹುದ್ದೆಗಳ ಸಂಖ್ಯೆ | ಕಾರಾವಿ ನಿಗಮದ ನಾರಮ್ಸ್ ಪ್ರಕಾರ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ. | ಪ್ರಸ್ತುತ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ. |
|---|---|---|---|---|
| 1 | ಇಂದಿರಾನಗರ,ಬೆಂಗಳೂರು | 06 | 10 | 04 |
| 2 | ಮೈಸೂರು | 04 | 06 | 02 |
| 3 | ಮಂಗಳೂರು | 03 | 06 | 03 |
| 4 | ದಾವಣಗೆರೆ | 02 | 03 | 01 |
| 5 | ಹುಬ್ಬಳ್ಳಿ | 02 | 03 | 01 |
| 6 | ದಾಂಡೇಲಿ | 01 | 02 | 01 |
| | ಒಟ್ಟು= | 18 | 30 | 12 |

ಮೇಲೆ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕಾರಾವಿ ಆಸ್ಪತ್ರೆಗಳಿಗೆ ಪ್ರಸ್ತುತ ಬರುವ ವಿಮಾ ರೋಗಿಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಅವರುಗಳಿಗೆ ಗರಿಷ್ಠ ಮಟ್ಟದಲ್ಲಿ ಹಾಗೂ ನಿಗಧಿತ ಸಮಯದೊಳಗೆ ಪ್ರಯೋಗ ಶಾಲಾ ಸೌಲಭ್ಯವನ್ನು ವಿಸ್ತರಿಸಲು ಕಾರಾವಿ ನಿಗಮದ ನಾರಮ್ಸ್ ಪ್ರಕಾರ ಪ್ರಸ್ತಾವನೆಯಲ್ಲಿ ಕೋರಲಾದಂತೆ ಹುದ್ದೆಗಳನ್ನು ಸೃಜಿಸಿ ಸೂಕ್ತ ಮಂಜೂರಾತಿ ಆದೇಶ ಹೊರಡಿಸುವಂತೆ ಕಾರಾವಿ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 107 ಎಲ್ಎಸ್ಐ 2015,ದಿನಾಂಕ:30–12–2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕಾರ್ಮಿಕ ರಾಜ್ಯ ವಿಮಾ ನಿಗಮದ ನಾರಮ್ಸ್ ಪ್ರಕಾರ ಈ ಕೆಳಕಂಡ ಪ್ರಕಾರವಾಗಿ 28 (ಇಪ್ಪತ್ತೆಂಟು ಮಾತ್ರ) ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು ಸೃಜಿಸಿ ಮತ್ತು ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳು:–

| ಕ್ರ.ಸಂ. | ಕಾರಾವಿ ಆಸ್ಪತ್ರೆಗಳ ಹೆಸರು | ಸೃಜಿಸಲಾದ ಹುದ್ದೆಗಳ ಸಂಖ್ಯೆ. |
|---|---|---|
| 1 | ಇಂದಿರಾನಗರ,ಬೆಂಗಳೂರು | 03 |
| 2 | ಮೈಸೂರು | 03 |
| 3 | ಮಂಗಳೂರು | 03 |
| 4 | ದಾವಣಗೆರೆ | 02 |
| 5 | ಹುಬ್ಬಳ್ಳಿ | 01 |
| 6 | ಬೆಳಗಾವಿ | 02 |
| 7 | ದಾಂಡೇಲಿ | 01 |
| 8 | ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ. | 01 |
| | ಒಟ್ಟು= | **16** |

2. ಕಿರಿಯ ಪ್ರಯೋಗಶಾಲಾ ತಂತ್ರಜ್ಞರು:–

| ಕ್ರ.ಸಂ. | ಕಾರಾವಿ ಆಸ್ಪತ್ರೆಗಳ ಹೆಸರು | ಸೃಜಿಸಲಾದ ಹುದ್ದೆಗಳ ಸಂಖ್ಯೆ. |
|---|---|---|
| 1 | ಇಂದಿರಾನಗರ,ಬೆಂಗಳೂರು | 04 |
| 2 | ಮೈಸೂರು | 02 |
| 3 | ಮಂಗಳೂರು | 03 |
| 4 | ದಾವಣಗೆರೆ | 01 |
| 5 | ಹುಬ್ಬಳ್ಳಿ | 01 |
| 6 | ದಾಂಡೇಲಿ | 01 |
| | ಒಟ್ಟು= | **12** |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಎಫ್‌ಡಿ 531 ವೆಚ್ಚ–9/2015,ದಿನಾಂಕ:8–12–2015ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಲಕ್ಷ್ಮೀದೇವಿ**

ಪೀಠಾಧಿಕಾರಿ–5

ಕಾರ್ಮಿಕ ಇಲಾಖೆ (ಕಾ.ರಾವಿ.ಯೋ.ವೈ.ಸೇವೆಗಳು)

**PR. 72**
**SC. 50**

## ಕಾರ್ಮಿಕ ಸಚಿವಾಲಯ

**ವಿಷಯ:** 2014–15ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭಿಸುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕುರ್ತಕೋಟಿ ಸಂಸ್ಥೆಗೆ ಭೂಮಿಯನ್ನು ದಾನವಾಗಿ ಪಡೆಯುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತನಿ/ತ/ಕಟ್ಟಡ–2/ವಿವ–20/2014–15 ದಿನಾಂಕ: 15/10/2015.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಜಂಟಿ ನಿರ್ದೇಶಕರು (ತ), ವಿಭಾಗೀಯ ಕಚೇರಿ, ಹುಬ್ಬಳ್ಳಿ ರವರು 2014–15ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭಿಸಲಾದ ಗದಗ ಜಿಲ್ಲೆಯ ಕುರ್ತಕೋಟಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಶ್ರೀ ಬೆಟಗೇರಿ ಕುಮಾರಪ್ಪ ತಂದೆ ದಿ. ಶ್ರೀ.ವಿರೂಪಾಕ್ಷಪ್ಪ, ಕುರ್ತಕೋಟಿ ಇವರು ತಮ್ಮ ಸ್ವಂತ ಹೆಸರಿನ ಸರ್ವೆ ನಂ: 829/1 ರಲ್ಲಿನ ಒಟ್ಟು ವಿಸ್ತೀರ್ಣದ 10 ಎಕರೆ 34 ಗುಂಟೆಯಲ್ಲಿ 2 ಎಕರೆ ಜಮೀನನ್ನು ದಾನರೂಪದಲ್ಲಿ ಉಚಿತವಾಗಿ ಕೈಗಾರಿಕಾ ತರಬೇತಿ ಸಂಸ್ಥೆ, ಕುರ್ತಕೋಟಿಗೆ ನೀಡಲು ರೂ. 200/– ಚಾಪಾ ಕಾಗದದಲ್ಲಿ ಒಪ್ಪಿರುವುದಾಗಿ ತಿಳಿಸಿರುತ್ತಾರೆ. ಸದರಿ ಸಂಸ್ಥೆಗೆ ದಾನಿಯವರ ತಂದೆಯವರಾದ ದಿ. ಶ್ರೀ. ವಿರೂಪಾಕ್ಷಪ್ಪ ಉಳವಪ್ಪ ಬೆಟಗೇರಿಯವರ ಹೆಸರನ್ನು ನಾಮಕರಣ ಮಾಡುವ ಕರಾರಿಗೆ ಸರ್ಕಾರ ಒಪ್ಪಿದಲ್ಲಿ ಜಮೀನನ್ನು ಉಚಿತವಾಗಿ ನೀಡುತ್ತೇವೆಂದು ತಿಳಿಸಿದ್ದು, ಅದರಂತೆ ಸದರಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕುರ್ತಕೋಟಿಗೆ ಭೂಮಿಯನ್ನು ಧಾನವಾಗಿ ಪಡೆಯಲು ಸರ್ಕಾರದ ಆಡಳಿತಾತ್ಮಕ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 584 ಇಟಿಐ 2015 ಬೆಂಗಳೂರು, ದಿನಾಂಕ: 19/12/2015.**

2014–15ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭಿಸಲಾದ ಗದಗ ಜಿಲ್ಲೆಯ ಕುರ್ತಕೋಟಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಶ್ರೀ ಬೆಟಗೇರಿ ಕುಮಾರಪ್ಪ ತಂದೆ ದಿ. ಶ್ರೀ.ವಿರೂಪಾಕ್ಷಪ್ಪ, ಕುರ್ತಕೋಟಿ ಇವರು ತಮ್ಮ ಸ್ವಂತ ಹೆಸರಿನ ಸರ್ವೆ ನಂ: 829/1 ರಲ್ಲಿನ ಒಟ್ಟು ವಿಸ್ತೀರ್ಣದ 10 ಎಕರೆ 34 ಗುಂಟೆಯಲ್ಲಿ 2 ಎಕರೆ ಜಮೀನನ್ನು ದಾನರೂಪದಲ್ಲಿ ಉಚಿತವಾಗಿ ಕೈಗಾರಿಕಾ ತರಬೇತಿ ಸಂಸ್ಥೆ, ಕುರ್ತಕೋಟಿಗೆ ನೀಡಲು ರೂ. 200/– ಚಾಪಾ ಕಾಗದದಲ್ಲಿ ಒಪ್ಪಿರುವುದಾಗಿ ತಿಳಿಸಿದ್ದು, ಸದರಿ ಸಂಸ್ಥೆಗೆ ದಾನಿಯವರ ತಂದೆಯವರಾದ ದಿ. ಶ್ರೀ. ವಿರೂಪಾಕ್ಷಪ್ಪ ಉಳವಪ್ಪ ಬೆಟಗೇರಿಯವರ ಹೆಸರನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನಾಮಕರಣ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು**

- ದಾನಿಗಳು ಇಷ್ಟ ಪಟ್ಟ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕಟ್ಟಡದ ಒಟ್ಟು ಅಂದಾಜಿನ 1:3ನೇ ಭಾಗದಷ್ಟು ಅಥವಾ ಹೆಚ್ಚಿನ ಹಣ ನೀಡಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಟ್ಟಡ ಎಂದರೆ ಕಟ್ಟಡ ನಿರ್ಮಾಣಕ್ಕಾಗಿ ಶಾಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲು ಅನುಕೂಲವಾಗಿರುವ ಒಂದು ಪೂರ್ಣ ಹಂತವಾಗಿರುತ್ತದೆ. ಕೇವಲ ಒಂದು ಅಥವಾ ಎರಡು ಕೊಠಡಿಗಳಿಗೆ ಅನ್ವಯಿಸುವುದಿಲ್ಲ.
- ಇದಕ್ಕಿಂತ ಕಡಿಮೆ ಮೊತ್ತದ ದಾನ ನೀಡಿದ ಪಕ್ಷದಲ್ಲಿ ಆ ಮೊತ್ತದಿಂದ ಕಟ್ಟಲ್ಪಟ್ಟ ಕೊಠಡಿ, ಒಳಾಂಗಣ ಅಥವಾ ಆ ವಿಭಾಗಕ್ಕೆ ಮಾತ್ರ ಸದರಿ ದಾನಿಗಳು ಇಚ್ಚಿಪಟ್ಟ ಹೆಸರನ್ನು ನಾಮಕರಣ ಮಾಡುವ ಅವಕಾಶವಿರುವುದು.
- ದಾನಿಗಳು ನೀಡುವ ದಾನ ಜಮೀನಿನ ರೂಪದಲ್ಲಿದ್ದು, ಕ್ರೀಡಾಂಗಣಕ್ಕೆ ಉಪಯುಕ್ತವಾಗಿದ್ದರೆ, ಈ ಕ್ರೀಡಾಂಗಣಕ್ಕೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲಾಗುವುದು.
- ಒಬ್ಬರು ಮತ್ತು ಹೆಚ್ಚಿನ ದಾನಿಗಳು ಒಂದೇ ವಿದ್ಯಾ ಸಂಸ್ಥೆಗೆ ದಾನ ನೀಡಿದಾಗ ಆ ವಿದ್ಯಾ ಸಂಸ್ಥೆಯ ಕಟ್ಟಡ ಅಥವಾ ಭೂಮಿಯನ್ನು ವಿಂಗಡಿಸಿ, ಪ್ರತಿಯೊಬ್ಬ ದಾನಿಗಳು ಸೂಚಿಸುವ ಹೆಸರನ್ನಿಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಹಣದ ರೂಪದಲ್ಲಿದ್ದರೆ ಹಣ ಸ್ವೀಕರಿಸಿ ಸರ್ಕಾರಿ ಖಾತೆಗೆ ಜಮಾ ಮಾಡಿಕೊಂಡ ನಂತರ ಮೇಲ್ಕಂಡ ನಿಬಂಧನೆಗೆ ಒಳಪಟ್ಟು ದಾನಿಗಳು ಇಚ್ಚಿಸಿದ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಆಸ್ತಿ ರೂಪದಲ್ಲಿದ್ದರೆ, ದಾನ ಸ್ವೀಕರಿಸುವ ಹಕ್ಕುಪತ್ರದ ದಾಖಲೆಗಳು ನ್ಯಾಯಬದ್ಧವಾಗಿರುವುದನ್ನು ಪರಿಶೀಲಿಸಿ ಸದರಿ ಆಸ್ತಿಯನ್ನು ಕಾನೂನು ತೊಡಕುಗಳು ಬಾರದಂತೆ ಶಾಲೆಗೆ ವರ್ಗಾಯಿಸಿಕೊಂಡ ಮೇಲೆ ತಿಳಿಸಿರುವ ನಿಬಂಧನೆಗಳನ್ನು ಪೂರೈಸಿದ ನಂತರ ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸಿದ ಹೆಸರನ್ನು ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ಸ್ವೀಕರಿಸುವ ದಾನ, ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲು ಮಾತ್ರ ಅನ್ವಯವಾಗುತ್ತದೆ. ಸ್ವೀಕರಿಸಿದ ದಾನವನ್ನು ಯಾವುದೇ ಕಾರಣಗಳಿಂದಾಗಿ ಹಿಂತಿರುಗಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ವಿ.ಪ್ರಕಾಶ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.(ಉದ್ಯೋಗ ಮತ್ತು ತರಬೇತಿ)

**PR. 38**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59